ಬೆಲೆ ಎರಡು ಆಣೆ

# ಕರ್ಮವೀರ

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

ಸಂಪಾದಕರು: ಹ. ರಾ. ಪುರೋಹಿತ, ಎಂ. ಎ.

Editor, H. R. PUROHIT, M. A.

[ ಸಂಪುಟ ೨೧ ] ಹುಬ್ಬಳ್ಳಿ, ಸೋಮವಾರ ತಾರೀಖು ೧೯—೪—೧೯೪೮ [ ಸಂಚಿಕೆ ೨ ]



## ಶ್ರೀಮತಿ ಸರೋಜಿನಿ ನಾಯಡು



ಇವರು ಭಾರತದ ಮೊಟ್ಟ ಮೊದಲನೆಯ ಸ್ತ್ರೀ-ಗವರ್ನರರೆನಿಸಿ, ಸಂಯುಕ್ತ ಪ್ರಾಂತದಲ್ಲಿ ಅಧಿಕಾರ ವಹಿಸಿ ನಾಡಿನ ಮಹಿಳಾ ಲೋಕದ ಅಪೂರ್ವ ಹೆಮ್ಮೆಗೆ ಕಾರಣವಾಗಿದ್ದಾರೆ.

# ಪುಸ್ತಕ ಮತ್ತು ವಿಮರ್ಶೆ

## ಅಶೋಕ ಚಕ್ರ

ಬರೆದವರು, ರಾಶೋಹ. ಪ್ರಕಾಶಕರು, ಎಂ. ವಿ. ಸೀತಾರಾಮಯ್ಯ, ಎಂ. ಎ. ಪ್ರಾರಂಭಿಸಿದವರು ಎಸ್. ಎಸ್. ಎಸ್. ಬುಕ್‌ಡಿಪೋ, ಹೊಸ ಮಾರ್ಕೆಟ್, ಬೆಂಗಳೂರು ನಗರ. ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ನಗರ. ಪುಟಗಳು ೩೦. ಬೆಲೆ ೮ ಆಣೆ.

ಇದರಲ್ಲಿ ೧೯ ಕವನಗಳಿವೆ. ಅವುಗಳಲ್ಲಿ ಭೂತ ದಯೆ ಎಂಬುದು ಕಥನ ಕವನ. ಈ ಎಲ್ಲ ಕವನಗಳಲ್ಲಿಯೂ ಭಾರತದ ಇಂದಿನ ರಾಜಕೀಯದ ಆಗುಹೋಗುಗಳ ಪ್ರತಿನೆಳಲುಂಟು. ಇದು ಈ ಸಂಗ್ರಹದ ವೈಶಿಷ್ಟ್ಯವೇ ಎನ್ನಬಹುದು. ಬಿಡುವು, ಭೂತದಯೆ, ಎಂಬ ಕವನಗಳು ಮಾತ್ರ ಈ ಮಾತಿಗೆ ಅಪವಾದವೆನ್ನಬಹುದು. "ಬಂದಿತು ಬಿಡುಗಡೆ, ಬಿಡುಗಡೆ ಹಬ್ಬಕೆ, ತೋರಣ ಕಟ್ಟೋಣ, ನಾಡು ನಗುತಿರಲಿ, ಅಶೋಕ ತಳಿರಿನ ತೋರಣ ಕಟ್ಟೋಣ" ಎಂದೂ "ಹೊಸತು ಹಬ್ಬವಿದೂ ಕನ್ನಡ ಹಬ್ಬಕೆ ತೋರಣ ಕಟ್ಟೋಣ, ಒಸಗೆಯಾಗಲಿದೆ ನಾಡು ನಾಡಿಗೇ ತೋರಣ ಕಟ್ಟೋಣ," ಎಂದೂ ಹೇಳಿ ನಾಡಿಗೆ ಹೊಸದಾಗಿ ಬಂದ ಸ್ವಾತಂತ್ರ್ಯಕ್ಕಾಗಿ ಕವಿ ಸಂಭ್ರಮ ವ್ಯಕ್ತಗೊಳಿಸಿದ್ದಾನೆ. ರಾಘವನು ಕನ್ನಡ ಕವಿತಾಲೋಕಕ್ಕೆ ಹೊಸಬರಲ್ಲವಾಗಿ ಹೆಚ್ಚಿನ ವಿಮರ್ಶೆ ಅನವಶ್ಯ. ಪುಸ್ತಕದ ರಕ್ಷಾಕವಚದ ಮೇಲೆ ಅಶೋಕ ಚಕ್ರಾಂಕಿತ ತ್ರಿಮುಖ ಸಿಂಹ ಮುದ್ರೆಯ ಚಿತ್ರವಿದೆ.

## ತಿರುಮಾಲೈ

ಅನುವಾದಕರು, ಅ. ನ. ಶ್ರೀನಿವಾಸೈಯಂಗಾರ. ಪ್ರಕಾಶಕರು, ಮೈಸೂರು ಪ್ರಿಂಟಿಂಗ ಮತ್ತು ಪಬ್ಲಿಷಿಂಗ ಹೌಸ, ಮೈಸೂರು. ಪುಟಗಳು ೩೪+೧೦. ಬೆಲೆ ೧೨ ಆಣೆ.

ಶ್ರೀ ಅ. ನ. ಶ್ರೀನಿವಾಸೈಯಂಗಾರರು ಶ್ರೀ ಶಾಮುವಾಸ ಗ್ರಂಥ ಮಾಲೆಯ ಸಂಪಾದಕರು. ಇವರೇ ತಿರುಮಾಲೈ ಎಂಬ ಭಕ್ತಿ ಗೀತದ ಕನ್ನಡ ಗದ್ಯಾನುವಾದವನ್ನು ಮೂಲ ತಮಿಳ ಪಾಠದೊಡನೆ ಪ್ರಕಟಿಸಿದ್ದಾರೆ. ಇದನ್ನು ಹಾಡಿದವರು ಭಕ್ತಾಗ್ರಣಿಯಾದ ತೊಂಡರಡಿಪ್ಪೊಡಿಯಾಳ್ವಾರ್ ಅವರು. ಇವರು ಮಂಡಂಗುಡಿ ಎಂಬ ಊರಲ್ಲಿ ಕ್ರಿ. ಶ. ೨೮೧೪ ರಲ್ಲಿ ಜನಿಸಿದರೆಂದೂ ಇವರ ಪೂರ್ವ ನಾಮವು ಶ್ರೀ ವಿಪ್ರನಾರಾಯಣರೆಂದು ಇತ್ತೆಂದೂ ಆಖ್ಯಾಯಿಕೆ ಇದೆ. ತಿರುಮಾಲೈ ಎಂದರೆ ಸಿರಿ ಮಾಲೆ ಎಂದು ಅರ್ಥ. ತೊಂಡರಡಿಪ್ಪೊಡಿ ಎಂದರೆ ಭಕ್ತರ ಪಾದದ ಧೂಳಿ ಎಂಬರ್ಥ. ಈ ಹೆಸರನ್ನಿಟ್ಟುಕೊಂಡ ಈ ಭಕ್ತರ ನಿರಹಂಕಾರವೃತ್ತಿಯನ್ನು ಎಷ್ಟು ಹೊಗಳಿದರೂ ಕಡಿಮೆಯೇ. ಮುನ್ನುಡಿಯಲ್ಲಿ ಶ್ರೀ ವಿಪ್ರನಾರಾಯಣರ ಸಂಕ್ಷಿಪ್ತ ಚರಿತ್ರೆಯನ್ನೂ ಕೊಡಲಾಗಿದೆ.

ಶ್ರೀ ರಂಗನಾಥನನ್ನು ಕೊಂಡಾಡಿ ಭಕ್ತಿಪರವಶತೆಯಿಂದ ಹಾಡಿದ ೪೫ ಹಾಡುಗಳಿವು. ಶ್ರೀ ರಂಗನಾಥನಿಗೆ ತೊಂಡರಡಿಪ್ಪೊಡಿಯಾಳ್ವಾರ್ ತೊಡಿಸಿದ ಈ ಚಿರ ನವೀನ ಗೀತ ಹಾರದ ಪರಿಮಳವನ್ನು ಕನ್ನಡಿಗರಿಗೆ ಒದಗಿಸಿಕೊಟ್ಟು ಶ್ರೀ ಶಾಮುವಾಸ ಗ್ರಂಥ ಮಾಲೆಯ ಸಂಪಾದಕರು ದೊಡ್ಡ ಕೆಲಸ ಮಾಡಿದ್ದಾರೆ.

## ಮೇಕೆದಾಟು ಮತ್ತು ಇತರ ಕಥನ ಕವನಗಳು

ಬರೆದವರು, ಎಸ್. ಎಸ್. ವೀರಪ್ಪ, ಬಿ. ಎಸ್. ಸಿ., ಬಿ. ಟಿ., ಮೈಸೂರು, ಶಿಕ್ಷಣ ಶಾಖೆ. ಪ್ರಕಾಶಕರು, ಎಸ್. ಎಸ್. ಎಸ್. ಪುಸ್ತಕ ಪ್ರಕಟನಾಲಯ, ಹೊಸ ಮಾರ್ಕೆಟ್, ಬೆಂಗಳೂರು ನಗರ. ಪುಟಗಳು ೫೮, ಬೆಲೆ ೧೨ ಆಣೆ.

ಈ ಚಿಕ್ಕ ಪುಸ್ತಕದಲ್ಲಿ, ಮೇಕೆದಾಟು, ಹಬ್ಬದ ಸಂತೆ, ಕಣಿವೆಯ ದಾರಿ, ಮಾದನ ಸೇವೆ, ಅಯ್ಯಪ್ಪನ ಸ್ವರ್ಗ ಹೀಗೆ ೫ ಕಥನ ಕವನಗಳಿವೆ. ಎಲ್ಲ ಕತೆಗಳು ಓದಿಗೆ ಸುಲಭವಿವೆ. ಹಬ್ಬದ ಸಂತೆ ಎಂಬ ಕಥೆಗೆ ಇಂಗ್ಲೀಷ ಕೃತಿಯೊಂದು ಆಧಾರವಾಗಿದ್ದ ಮಾತನ್ನು ಬರಹಗಾರರು ಹೇಳದಿದ್ದರೆ ಹಾಗೆಂದು ಗೊತ್ತಾಗುತ್ತಿರಲಿಲ್ಲ. ಅಷ್ಟು ಅದು ನಮ್ಮವರ ಜೀವನದ ಗತಿಯನ್ನೆ ಅನುಸರಿಸಿ ಹೊರಟಿದೆ. ಹುಡುಗರಿಗೆ ಈ ಕತೆಗಳು ರುಚಿಸದಿರವು. ಭಾಷೆಯ ಓಟಕ್ಕೆ ಅಡ್ಡಿ ಆತಂಕ ಇಲ್ಲ. ಕನ್ನಡದಲ್ಲಿ ಕಥನ ಕವನಗಳನ್ನು ಮೊದಲು ರುಚಿಕಟ್ಟಾಗಿ ಬರೆದವರೆಂದರೆ ಮಾಸ್ತಿಯವರು. ಅವರ ಕಥನ ವೈಖರಿಯನ್ನೂ ರಸಸಿಕ್ತ ವಾಕ್ಯವಿನ್ಯಾಸವನ್ನೂ ಈ ಬಗೆಯ ಕೃತಿಗಳನ್ನು ಬರೆವವರು ಆಯತ್ತಗೊಳಿಸಿಕೊಂಡಷ್ಟು ಕಡಮೆಯೇ ಎಂದು ಹೇಳದಿರಲಾರೆವು. ಈ ಪುಸ್ತಕದ ರಕ್ಷಾಪತ್ರದ ಮೇಲಿರುವ ಹಬ್ಬದ ಸಂತೆಯ ಸಿದ್ದಿಯ ಚಿತ್ರ ಸೊಗಸಾಗಿದೆ. ಸಿದ್ದಿಯ ತಲೆಗಿಟ್ಟ ಭಾರವಾದ ಬುಟ್ಟಿಯನ್ನು ಇನ್ನಷ್ಟು ಹಿಂದೆ ಸರಿಸಿ ತೂಕ ಸಾಧಿಸಿದ್ದರೆ ಕೈ ಆಸರವಿಲ್ಲದಿದ್ದರೂ ಬುಟ್ಟಿ ನಿಲ್ಲಬಹುದಿತ್ತು. ಚಿತ್ರದ ಹಿನ್ನೆಲೆಯಲ್ಲಿದ್ದ ಗೀರುಗೀರಿನ ನೋಟವೂ ಮೋಡದ ಗೆರೆಗಳೂ ಮುನ್ನೆಲೆಯಲ್ಲಿದ್ದ ಸಿದ್ದಿಯ ಸದ್ಯಥವಾದ ಛಾಯಾ ಚಿತ್ರದ ಬಲವನ್ನೆಲ್ಲ ಉಡುಗಿಸಿಬಿಟ್ಟಿವೆ. ಮುದ್ರಣ ಅಂದವಾಗಿದ್ದು ಬಳಸಿದ ಹಾಳೆಗಳು ಬೆಳ್ಳಗಿವೆ.

## ಅಮೃತವಾಹಿನಿ

ಗ್ರಂಥಕರ್ತ, ಆರ್. ಎ. ಕೇಸರಿ, ಬಿ. ಎ. ಶ್ರೀ ರಾಮಚಂದ್ರ ಕುಟೀರಂ, ೧೪೭೩ ಸಯಾಜಿರಾವ ರೋಡ ಮೈಸೂರ, ಪುಟಗಳು ೬೬+೧೨. ಬೆಲೆ ೧ ರೂ. ೪ ಆ.

ಅಮೃತ ವಾಹಿನಿಯು ೬೫ ಗೀತೆಗಳ ಸಂಕಲನ. ಇದನ್ನು ಬರೆದವರು ತಮ್ಮನ್ನು ಕವಿಯೆಂದು ಕರೆದುಕೊಳ್ಳದೆ ಗ್ರಂಥಕರ್ತನೆಂದು ಹೇಳಿಕೊಂಡಿದ್ದಾರೆ. ಮನೆತನದಿಂದ ಉಳ್ಳವರಾದರೂ ಅವರಿಗೆ ಸಂಸಾರದಲ್ಲಿ ತುಂಬ ಉಪರತಿಯುಂಟಾಗಿ ಹೋಗಿದೆ. ನಾಕ ನರಕಗಳು ಇದೇ ಲೋಕದಲ್ಲಿ ಪಾಪ ಪುಣ್ಯ ಫಲ ಇದೇ ಜನ್ಮದಲ್ಲಿ ಎಂದು ಅವರಿಗೆ ಅನುಭವಕ್ಕೆ ಬಂದು ಇಲ್ಲಿನ ಹಾಡುಗಳಿಗೆ ಕಾರಣವಾಗಿವೆ. ಈ ಕವಿತೆಗಳಲ್ಲಿ ಅನುಭವ, ವೈರಾಗ್ಯ, ನೀತಿ ಇವನ್ನೆಲ್ಲ ಕಾಣಬಹುದಾಗಿದೆ. ಇವುಗಳಿಗೆ ಉದಾಹರಣೆಯೆಂದು ನಿಜವಾದ ಆಭರಣ, ಹೇಗಿರಬೇಕು, ನಂಟು ಹದಿನೆಂಟು, ಬಂಧನದ ಮೂಲ, ಜೀವನ ನದಿಯಲ್ಲಿ ಎಂಬಿವೇ ಮೊದಲಾದ ಗೀತೆಗಳನ್ನು ಎತ್ತಿ ಹೇಳಬಹುದು. ಭಾಷೆ ಸುಲಭ. ಅದಕ್ಕೆ ದೇಶಿಯ ಜೋಡೂ ಉಂಟು. ಅಲ್ಲಲ್ಲಿ ಮಾತಿಗೆ ಭಕ್ತಿಯ ಮೆರಗೂ ಇದ್ದುದು ಕಾಣುವದು. ಈ ಹಾಡುಗಳನ್ನು ಬರೆದವರಿಗೆ ಕಾವ್ಯ ಸಂಸ್ಕಾರ ಅಷ್ಟಿರದಿದ್ದರೂ ಅನುಭವ ಬಲ ಸಾಕಷ್ಟಿದೆ. ಹಾಗೆಂದೇ ಹೇಳುವ ಮಾತಿಗೆ ಒಂದು ಗೌರವ ಉಂಟಾಗುತ್ತದೆ.

## ನವಿಲು ಮತ್ತು ಕಲಾಸುಂದರಿ (ಕವನಸಂಗ್ರಹಗಳು)

ಬರೆದವರು, ಕುವೆಂಪು. ಪ್ರಕಾಶಕರು ಕಾವ್ಯಾಲಯ, ಮೈಸೂರು. ನವಿಲು, ಪುಟಗಳು, ೮೪ ಬೆಲೆ, ಸಾದಾಪ್ರತಿ ೧ ರೂ. ೪ ಆ. ಕ್ಯಾಲಿಕೊ ಪ್ರತಿ ೨ರೂ. ೮೪. ಕಲಾಸುಂದರಿ, ಪುಟಗಳು, ೭೬ ಬೆಲೆ ಸಾದಾಪ್ರತಿ ೧ರೂ. ೪ಆ. ಕ್ಯಾಲಿಕೊ ಪ್ರತಿ ೨ರೂ. ೮ಆ.

ಮೊದಲು ಇವೆರಡೂ ಕವನ ಸಂಗ್ರಹಗಳು ನವಿಲು ಎಂಬ ಹೆಸರಿನಿಂದ ೨ ಭಾಗಗಳಾಗಿ ಪ್ರಕಟವಾಗಿದ್ದವು. ಈಗ ಕೆಲವೊಂದು ತಿದ್ದುವಡಿ ಹಾಗೂ ಮಾರ್ಪಾಟುಗಳೊಂದಿಗೆ ಬೇರೆ ಬೇರೆ ಹೆಸರಿಟ್ಟುಕೊಂಡು ಬೆಡಗಿನ ತೊಡವು ಧರಿಸಿ ಇವು ಹೊರಬಂದಿವೆ. ಕುವೆಂಪು ಅವರು ಕನ್ನಡದ ವಿಖ್ಯಾತ ಕವಿಗಳು. ಈ ಕವನಗಳು ದ್ವಿತೀಯ ಮುದ್ರಣದಲ್ಲಿ ಕಾಣಿಸಿಕೊಂಡಿರುವ ಕಾರಣ ಹೆಚ್ಚಿನ ವಿಮರ್ಶೆ ಅನವಶ್ಯ. ಹೊಸ ರೂಪದಲ್ಲಿ ಕಾಣಿಸಿಕೊಂಡ ಕಲಾ ಸುಂದರಿಯನ್ನೂ ನವಿಲನ್ನೂ ನಾವು ಅತ್ಯಾದರದಿಂದ ಬರಮಾಡಿಕೊಳ್ಳುತ್ತೇವೆ.

## ಬ್ರಾಹ್ಮಣನು ಯಾರು? ಯಾರಲ್ಲ?

ಮೂಲ ಸಂಗ್ರಹಕರ್ತ ಮತ್ತು ಪ್ರಕಾಶಕ, ಶ್ರೀ. ಐಕ್ಯಂಜೆ ಸುಬ್ಬರಾಯ, ಥಿಯೋಸೊಫಿಸ್ಟ, ಮೂಡಬಿದ್ರೆ, ದ. ಕನ್ನಡ. ಪುಸ್ತಕ ದೊರೆವ ವಿಳಾಸ, ಸ್ಕೂಲಬುಕ್ ಕಂ, ಮಂಗಳೂರು. ದ. ಕನ್ನಡ ಪುಟಗಳು ೮೨ ಬೆಲೆ ೪ ಆಣೆ.

ಈ ಪುಸ್ತಕದ ಮೂಲವು ಕೊಂಕಣಿ ಭಾಷೆಯಲ್ಲಿದ್ದು, ಶ್ರೀ. ಎಂ. ಕೇಶವಭಟ್ಟ, ಶಿರೋಮಣಿ, ಶ್ರೀನಿವಾಸ ಪಾಠಶಾಲೆ ಮಂಗಳೂರು ಇವರು ಅದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಈ ಪುಸ್ತಕದಲ್ಲಿ ನಿಜವಾದ ಬ್ರಾಹ್ಮಣನು ಯಾರು ಅವನು ಹೇಗೆ ಉಣಬೇಕು, ಏನು ಉಣಬೇಕು ಎಂಬುದನ್ನು ಮೊದಲು ಮಾಡಿ ಅನೇಕ ಮಾತುಗಳನ್ನು ವೈದಿಕ ಧರ್ಮ ಗ್ರಂಥಗಳ ಆಧಾರ ಎತ್ತಿ ತೋರಿಸಿ ವಿವರಿಸಿ ಹೇಳಲಾಗಿದೆ. ಆಧಾರ ವಚನಗಳು ವಿವಿಧ ಉಪನಿಷತ್ತು, ಮಹಾಭಾರತ, ಭಾಗವತ, ಮನುಸ್ಮೃತಿ, ಹಾರೀತ ಸ್ಮೃತಿ, ಧರ್ಮಪದ, ಯೋಗವಾಸಿಷ್ಠ, ಗೀತಾ ಆಪಸ್ತಂಭ ಧರ್ಮಸೂತ್ರ, ಪದ್ಮಪುರಾಣ ಇವೇ ಮೊದಲಾದ ೩೦ ಮಹತ್ವದ ಧರ್ಮ ಗ್ರಂಥಗಳಿಂದ ಉದ್ಧರಿಸಲ್ಪಟ್ಟಿವೆ. ಪುಸ್ತಕದ ಆದಿಗೆ ಅನ್ನಿಬಜೆಂಟಮ್ಮನವರ ಸೊಗಸಾದ ಭಾವಚಿತ್ರವಿದೆ. ಪುಸ್ತಕದ ಕೊನೆಗೆ ಸಾತ್ವಿಕ ರಾಜಸ ತಾಮಸ ಆಹಾರ ವಸ್ತುಗಳ ದೀರ್ಘ ತಾಲಿಕೆಯಿದೆ. ಎಲ್ಲರೂ ಓದಬೇಕಾದ ಹಾಗೂ ಸಂಗ್ರಹ ಯೋಗ್ಯ ಪುಸ್ತಕವಿದು.

## ಸಾಯುಜ್ಯ

೧

ಗಲ್ಲ ಗಲ್ಲದಲಿ ಮಿಂಚಿ ಮಿಡಿದ
ಒಲ್ಮೆಗೆಯ ನದಿಗಳೊಟ್ಟು
ಮೆಲ್ಲ ಮೆಲ್ಲನೆಮುಗರಿಯುದಂತೆ ನಾ-
ಲ್ಕುಟಿಯೊಳಾಯ್ತು ಗಟ್ಟು;
ನನ್ನ ಕಂಗಳಲಿ ಹೊಕ್ಕು ಚಿತ್ತದಲಿ
ಮೂಡಿತವನ ರೂಪ-
ನನ್ನ ಹೃದಯದಲ್ಲೊಮ್ಮೆ ಬೆಳಗಿತೋ
ಶಾಂತ ಕಾಂತ ದೀಪ!

೨

ಏಕ ದೇಹ ಪದದಲ್ಲಿ ಪರಿಣಮಿಸಿ-
ತೆಮ್ಮ ಯೋಗ ತಂತ್ರ-
ಸೋಕಿನಿಂದ ಸಮರಸತೆಗೆದೆಯನೊ-
ಯ್ದಿತ್ತು ಪ್ರೇಮ ಮಂತ್ರ;
ನಾಲ್ಕು ಕಿವಿಗಳಲ್ಲೇಕ ಕಾಲದಲಿ
ತುಂಬಿ ತುಳುಕಿ ನಿಂತು
ನಾಕ ನಮ್ಮಳೋ, ನಾವೆ ನಾಕದೊಳೊ?
ಎನಿಸಿತೇನಿದೆಂತು?

೩

ಹಕ್ಕೆತೆಕ್ಕೆಗಳ ತಿರುಹುತಿಪ್ಪುಗಳ
ನಾಗಮುರಿಗೆಯಲ್ಲಿ
ಹೊಕ್ಕುಹೊರಟ ಹೂಬಗೆಯ ಕಂಪು ಕಾ-
ನಮುಲ ರೂಪದಲ್ಲಿ-
ಕಣ್ಣು ಕಿವಿ ಕಪೋಲಾಧರಗಳ ಮೆ-
ಟ್ಟಿಲುಗಳೇರಿ ತೂರಿ,
ಸಲ್ಮೆಯೂರ ಸೌಂದರ್ಯಪೂರದಲಿ
ಮುಳುಗಿಕೊಮ್ಮೆ ಜಾರಿ!

೪

ನನ್ನ ನಲ್ಲನಾನಾಗಿ ನನ್ನಳೇ
ಹೊಕ್ಕು ನನ್ನ ಚೆಲ್ಲಿ,
ತನ್ನೊಳಿಂತು ಸಾಯುಜ್ಯ ಸವಿಯಿಸಿದ
ಹೊಸ ಯುಗಾದಿಯಲ್ಲಿ;
ನಲ್ಲನಲ್ಲೆಯೆಂಬೆಲ್ಲೆ ಮೀರಿದೇ-
ಕಾತ್ಮ ಭಾವದಲ್ಲಿ
ಎಲ್ಲ ಭೇದಕವಸಾನವಾದುದೋ
ಐಕ್ಯ ಸತ್ಯದಲ್ಲಿ!

೫

ಶಾಸನಗಳ ಕಟ್ಟಿಂದ ನಲ್ಲ ನ-
ಲ್ಲೆಯರ ಕಟ್ಟಿ ಬಿಚ್ಚಿ
ಮೋಸ ಮಾಡ ಬಹ ಲೋಕಕಿರಲಿ ಧಿ-
ಕ್ಕಾರ; ಬರಿದೆನೆಚ್ಚಿ,
ನಾಕವನ್ನು ನಿಮಿಷಾರ್ಧದಲ್ಲೆ ಮಿಡಿ-
ಲಲ್ಲಿ ಹಿಡಿದು ತರಲು
'ಏಕೆ ಏನು'ಗಳ ಬಿಸುಡಬಾರದೇ?
ಲೋಕವಕಟಮರುಳು!

೬

ನನ್ನ ನಲ್ಲ ನಾನಾಗಿ ಹೋದ ಕತೆ
ಎಂಥದೆಂಬುದೆಣಿಸು
ನಾನು ಅವನು ನರ-ನಾರಿಯೆಂಬುದನು
ಬೆರೆತು ಮರೆತ ಕಣಸು
ಎಲ್ಲಿ ನೋಡಿದರು 'ನಲ್ಲ ನಲ್ಲ' ಮ-
ತ್ತಲ್ಲದನ್ಯವಿಲ್ಲ-
ಇಲ್ಲಿ ಕಾಗದ, ಕುತರ್ಕ ಕೋರ್ಟಿನ ಕಾ-
ಯದೆಗೆ ತಾಣವಿಲ್ಲ!

—ಬಾಲ ಪುರಂದರ

## ಲೇಖಕರಿಗೆ ಸೂಚನೆ

ಅಂಚೆಚೀಟಿ ಲೇಖನದ ಜೊತೆಗೆ ಬಂದರೆ ಮಾತ್ರ ಸ್ವೀಕೃತ ಅಸ್ವೀಕೃತವೆಂಬುದನ್ನು ತಿಳಿಸಲಾಗುವದು. ಅಂಚೆ ಚೀಟಿ ಮತ್ತು ಲೇಖ ಇವುಗಳನ್ನು ಬೇರೆ ಬೇರೆ ಕಾಲದಲ್ಲಿ ಕಳುಹಿಸಿದರೆ, ಅಸ್ವೀಕೃತ ಲೇಖನವನ್ನು ಲೇಖಕರಿಗೆ ತಿರುಗಿ ಕಳುಹಲು ಸಾಧ್ಯವಾಗುವದಿಲ್ಲ. ಈ ಮೊದಲು ಅಂಚೆ ಚೀಟಿ ಇರದೆ ಕಳುಹಿದ ಲೇಖಗಳ ಬಗ್ಗೆ ಮಾಡುವ ಪತ್ರವ್ಯವಹಾರವನ್ನು ಗಮನಿಸಲಾಗುವದಿಲ್ಲ. ಲೇಖನವನ್ನು ಕಾಗದದ ಒಮ್ಮಗ್ಗುಲಿಗೆ ಸ್ಫುಟವಾಗಿ ಮಸಿಯಲ್ಲಿ ಬರೆದಿದ್ದರೆ ಮಾತ್ರ ಅದನ್ನು ಪರಿಶೀಲಿಸಲಾಗುವದು. ಉತ್ತಮ ಪಾಂಡಿತ್ಯಪೂರ್ಣ ಮತ್ತು ಪ್ರತಿಭಾನ್ವಿತ ಲೇಖನಗಳಿಗೆ ಯಥಾವಿಧಿ ದ್ರವ್ಯರೂಪದ ಮರ್ಯಾದೆಯನ್ನು ಸಲ್ಲಿಸುವ ರೂಢಿ ನಡೆದೇ ಇದೆ. ವಿದ್ವಾಂಸರಾದ ಲೇಖಕರು ಇತ್ತ ಲಕ್ಷ್ಯ ಕೊಡುವರಾಗಿ ನಂಬುತ್ತೇವೆ.

ವ್ಯವಸ್ಥಾಪಕ
ಕರ್ಮವೀರ

## ಸಾದರ ಸ್ವೀಕಾರ

### ಸೂರ್ಯಸಿದ್ಧಾಂತ ಪಂಚಾಂಗಂ

(ದೃಗ್ಗಣಿತ ಪಂಚಾಂಗ ಸಹಿತಂ) ಶಕೆ ೧೮೭೦ ಸರ್ವಧಾರಿನಾಮ ಸಂವತ್ಸರದ ಶ್ರೀಮದುತ್ತರಾದಿಮಠದವರಿಂದ ಪ್ರಕಟಿತವಾಗಿ ಮಠದ ಶಿಷ್ಯರುಗಳಿಗೆಲ್ಲ ಇದನ್ನು ಉಚಿತವಾಗಿ ಕೊಡಲಾಗುತ್ತದೆಯೆಂದು ಸಾರಿದ್ದಾರೆ. ಪುಟಗಳು ೭೨

### ಶ್ರೀ ಬಸವರಾಜ ಪಂಚಾಂಗಂ

ಶಕೆ ೧೮೭೦ ಸರ್ವಧಾರಿ ಸಂವತ್ಸರ. ಬ್ರಹ್ಮಶ್ರೀ ಸಿದ್ಧಾಂತಿ ಚನ್ನವೀರಶಾಸ್ತ್ರಿಗಳು ಸಾಲಿಮಠ ಹಾವೇರಿ ಇವರಿಂದ ರಚಿಸಲ್ಪಟ್ಟಿದೆ. ಪುಟಗಳು ೮೧. ಬೆಲೆ ೧೨ ಆಣೆ.

### ಸ್ವಾತಂತ್ರ್ಯ ಬಂತು

ಲೇಖಕರು, ಸ್ವಾತಂತ್ರ್ಯಪ್ರಿಯ. ಪ್ರಕಾಶಕರು ಕಂನುಡಿ ಪ್ರಕಾಶನ ಮಂದಿರ, ಹುಬ್ಬಳ್ಳಿ. ಪುಟಗಳು ೧೫ ಬೆಲೆ ೩ ಆಣೆ.

### ಮನೆಗೆ ಬಂದ ಮಹಾಬಲಿ

ಬರೆದವರು, ಭಾರತೀಸುತ. ಪ್ರಕಾಶಕರು, ಮನೋಹರ ಗ್ರಂಥಭಂಡಾರ, ಧಾರವಾಡ. ಪುಟಗಳು ೨೭ ಬೆಲೆ ೫ ಆಣೆ.

### Effect of Nationalisation

By, K. D. JALAN. ಪ್ರಕಾಶಕರ ಹೆಸರಿಲ್ಲ. ವಿಳಾಸವಿಲ್ಲ. ಪುಟಗಳು ೧೬. ಬೆಲೆ ಕಾಣಿಸಿಲ್ಲ. ಉದ್ಯೋಗಗಳ ರಾಷ್ಟ್ರೀಕರಣದಿಂದಾಗುವ ಪರಿಣಾಮವೇನು ಎಂಬುದರ ಚರ್ಚೆ ಇದರಲ್ಲಿದೆ.

## ಚಂದಾದಾರರಲ್ಲಿ ವಿನಂತಿ

—●—

ಯಾವದೇ ಪತ್ರವ್ಯವಹಾರ ಮಾಡುವಾಗ್ಗೆ ನಿಮ್ಮ ಚಂದಾ ನಂಬರನ್ನು ಅಂದರೆ ನಾವು ನಿಮ್ಮ ವಿಳಾಸದ ಪ್ರಾರಂಭಕ್ಕೆ ಸೇರಿಸಿದ ನಂಬರನ್ನು ಬರೆದರೆ ಮಾತ್ರ ನಿಮ್ಮ ಪತ್ರಕ್ಕೆ ಲಕ್ಷ್ಯಗೊಡಲಾಗುವದು. ಅವಧಿ ಮುಗಿಯುವ ಮುಂಚೆಯೇ ೧೫ ದಿನ ಪೂರ್ವದಲ್ಲಿ ವ್ಹಿ. ಪಿ. ಮಾಡಲಾಗುವದು. ವ್ಹಿ. ಪಿ ಬೇಡಾದವರು ೧೫ ದಿನ ಮೊದಲೇ ನಮಗೆ ತಿಳಿಸಬೇಕು. ವ್ಹಿ. ಪಿ. ನಿರಾಕರಿಸಿ ಹಿಂದುಗಡೆ M. O. ಮಾಡಿದರೆ ವ್ಹಿ. ಪಿ. ಖರ್ಚು ಮುರಿಯಲಾಗುವದು.

### ಕರ್ಮವೀರ ಚಂದಾ ವಿವರ

ಅಂಚೆ ವೆಚ್ಚ ಸಹಿತ (ಚಂದಾಹಣ ಮುಂಗಡ)

| | |
|---|---|
| ೧ ವರ್ಷ . . . . | ೬–೪–೦ |
| ೬ ತಿಂಗಳಿಗೆ . . . . | ೩–೪–೦ |
| ೩ ,, . . . . | ೧–೧೨–೦ |

ವ್ಹಿ. ಪಿ. ಯಿಂದ ತರಿಸಿಕೊಂಡಲ್ಲಿ ಪ್ರತಿಗೆ ೬ ಆಣೆ ಹೆಚ್ಚಿಗೆ ಬೀಳುವದು.

# ವಿವಿಧ ಪ್ರಪಂಚ

## ಬುದ್ಧಿ ಪರೀಕ್ಷೆ

'ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ— ಗುಣಕರ್ಮಾನುಸಾರವಾಗಿ ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ನಾನು ಸೃಜಿಸಿದೆ' ಎಂಬ ಸನಾತನ ಅರ್ಥಶಾಸ್ತ್ರ ತತ್ವದಂತೆ ನಮ್ಮಲ್ಲಿ ಅನೇಕ ಕೈಗಾರಿಕೆ ಮತ್ತು ಉದ್ಯೋಗಗಳು ಪರಂಪರಾಗತವಾಗಿ ಬಂದು ಕುಲಕಸಬೆನಿಸಿವೆ. ಈ ಕುಲಕಸಬಿನವರಲ್ಲಿ Natural Aptitude– ಸ್ವಾಭಾವಿಕ ಅಭಿರುಚಿಯುಳ್ಳವರಲ್ಲದೆ ಜಡಾಭ್ಯಾಸಿಗಳು ಕಾರ್ಯಕುಶಲರಿರುವುದಿಲ್ಲ. ಆದರೆ ಇದರಿಂದ ಅರ್ಥಶಾಸ್ತ್ರದ ಮುಖ್ಯ ತತ್ವವಾದ ಮಿತವ್ಯಯವು ಶಿಕ್ಷಣಕ್ಷೇತ್ರದಲ್ಲಿ ಸುಲಭವಾಗಿ ಸಾಧಿಸಲ್ಪಡುತ್ತದೆ. ಕೌಶಲವೆ ಮುಖ್ಯವೆಂಬ ಈ ಆಧುನಿಕ ಯುಗದಲ್ಲಿ ಅಭಿರುಚಿಗೊಪ್ಪುವ ಶಕ್ತಿಗೆ ಹೊಂದುವ ಕಾರ್ಯಕ್ಷೇತ್ರದಲ್ಲಿ ಆಯಾ ವಿಷಯಜ್ಞರನ್ನು ನಿಯಮಿಸಿ ತನ್ಮೂಲಕ ಮನುಷ್ಯನ ವಿಶಿಷ್ಟ ಶಕ್ತಿಯ ಸದುಪಯೋಗ ಪಡೆದುಕೊಳ್ಳಬೇಕೆಂಬುದೇ ಗುರಿಯಾದ್ದರಿಂದ ಆಯಾ ವ್ಯಕ್ತಿಗಳನ್ನು ಬುದ್ಧಿ ಪರೀಕ್ಷೆಗೊಳಪಡಿಸಿ ಅವರ ಸ್ವಾಭಾವಿಕ ಕ್ಷೇತ್ರವನ್ನು ತೋರಿಸಿಕೊಡುವ ಕೆಲಸವನ್ನು ವಿಜ್ಞಾನಿಗಳು ನಡೆಸಿದ್ದಾರೆ.

ಅಮೇರಿಕವಿಂದು ಆಧುನಿಕ ನಾಗರಿಕತೆಯಲ್ಲಿ ಬಹಳ ಮುಂಬರಿದ ದೇಶ. ಅಲ್ಲಿ ಮನಃಶಾಸ್ತ್ರದ ಸಂಶೋಧ ಬಹಳವಾಗಿ ಸಾಗಿದೆ. ಅಂತಹ ಸಂಶೋಧಕರಲ್ಲಿ ಆಲ್‌ಫ್ರೆಡ್ ಬೆನೆಟ್ ಎಂಬವರು ಮೊದಲಿಗರಾದರು. ಅವರು ಈ ವಿಷಯದಲ್ಲಿ ಹಲ ಪರೀಕ್ಷೆಗಳನ್ನು ಯೋಜಿಸಿದರು. ಅವುಗಳು ಅತಿ ಸರಳವಾದುದರಿಂದ ಪ್ರಾರಂಭವಾಗಿ ಕಠಿನತಮವಾದ ಪರೀಕ್ಷೆಯಲ್ಲಿ ಮುಗಿಯುತ್ತವೆ. ಆ ಪರೀಕ್ಷೆಯಲ್ಲಿ ಸರಳತಮವಾದ ಪರೀಕ್ಷೆಗಳು— ನಿನ್ನ ಮೂಗನ್ನು ತೋರಿಸು; ಕಿವಿಗಳನ್ನು, ಕಣ್ಣುಗಳನ್ನು ತೋರಿಸು; ಬೀಗದ ಕೈ, ಚೂರಿ, ಸೀಸದ ಕಡ್ಡಿಗಳನ್ನು ಗುರುತಿಸು– ಈ ಚಿತ್ರದಲ್ಲಿರುವ ಪರಿಚಿತ ವಸ್ತುಗಳನ್ನು ಹೆಸರಿಸು–ಎಂಬ ಮಾದರಿಯವು. ಇದರಿಂದ ಪರೀಕ್ಷಕರು Intelligence Quotient ಬುದ್ಧಿ ಭಾಗವನ್ನು ಕಂಡು ಹಿಡಿಯುತ್ತಾರೆ. ಮಗುವಿನ ಕಾಲಿಕ ಆಯುರ್ಮಾನ ಮತ್ತು ಬೌದ್ಧಿಕ ಆಯುರ್ಮಾನಗಳ ನಡುವಣ Ratio ತ್ರೈರಾಶಿಕ ಪ್ರಮಾಣವು ಆ ಬುದ್ಧಿ ಭಾಗವನ್ನು ನಿರ್ದೇಶಿಸುತ್ತದೆ. ಅಂದರೆ ಒಬ್ಬ ೮ ವರ್ಷ ವಯಸ್ಸಿನ ಬಾಲಕನು ೧೦ ವರ್ಷದ ಪರೀಕ್ಷೆಯಲ್ಲಿ ಉತ್ತೀರ್ಣನಾದರೆ ಅವನಿಗೆ ಸಿಗುವ ಗುಣವು ೧೦ ÷ ೮ = ೧.೨೫. ಅನುಕೂಲಕ್ಕಾಗಿ ಅದನ್ನು ಬು. ಭಾ. ೧೨೫ ಎಂದು ಬರೆಯಲಾಗುತ್ತದೆ. ಈ ಪರೀಕ್ಷೆಗಳಿಂದ Basic Intelligence— ಮೂಲ ಬುದ್ಧಿವಂತಿಕೆಯ ಅಂಶವನ್ನು ಕಂಡು ಹಿಡಿಯಲಾಗುವುದೆಂಬುದರಿಂದ ಈ ಪದ್ಧತಿ ಎಷ್ಟು ಟೀಕೆಗಳಿಗೆ ಗುರಿಯಾದರೂ ಪ್ರಸಿದ್ಧಿ ಪಡೆಯದೆ ಉಳಿಯಲಿಲ್ಲ. ಈ ಪದ್ಧತಿಯಲ್ಲಿದ್ದ ಉಳಿದ ಒಂದೆರಡು ದೋಷವನ್ನು ಮನಃಶಾಸ್ತ್ರಜ್ಞರು ಸುಧಾರಿಸಿದರು. ಅದರ ಮೇಲೆ ಅದು ಸಂಪೂರ್ಣತೆ ಪಡೆಯಿತು. ಆ ಪ್ರಕಾರ ದಡ್ಡರ ಬು. ಭಾ. ೨೦ ರಿಂದ ೨೫; ನಿರ್ವೀರ್ಯರದು ೨೫ ರಿಂದ ೫೦; ದುರ್ಬಲ ಮನಸ್ಕರದು ೫೦ ರಿಂದ ೭೦ ಮತ್ತು ಸ್ವಾಭಾವಿಕ ಕಿಳಿಗೇಡಿಗಳ ಬು. ಭಾ. ೭೦ ರಿಂದ ೯೦ ಎಂದು ಕಂಡು ಬಂದಿದೆ. ಈ ಪರೀಕ್ಷೆಯಲ್ಲಿ ಚಿಕ್ಕ ಮಕ್ಕಳನ್ನೂ ದೊಡ್ಡವರನ್ನು ಬೇರೆ ಬೇರಾಗಿ ವರ್ಗೀಕರಿಸಿ ಪರೀಕ್ಷಿಸಬೇಕಾಗುತ್ತದೆ. ಏಕೆಂದರೆ ಚಿಕ್ಕವರ ಫಲಕಾರಕ ಗುಣ ಸಂಖ್ಯಾರೂಪದಲ್ಲಿ ಹೆಚ್ಚು ಬರುತ್ತದೆ. ದೊಡ್ಡವರದು ಕಡಿಮೆ ಬರುತ್ತದೆ.

ಬು. ಭಾ. ೯. ಇರುವ ಮಗುವು ಕಾಯದೆ, ವೈದ್ಯಕೀಯ ಅಭ್ಯಾಸ, ಶಿಲ್ಪ, ಮೊದಲಾದ ಕಷ್ಟಕರ ಉದ್ಯೋಗಗಳಿಗೆ ಅರ್ಹವಾಗನಾರನು. ಅವನು ಕಡಿಮೆ ಪರಿಶ್ರಮದ ಉದ್ಯೋಗಗಳನ್ನು ಕೈಕೊಂಡರೆ ಮಾತ್ರ ಅಭಿವೃದ್ಧಿ ಹೊಂದುತ್ತಾನೆ. ಸಾಮಾನ್ಯವಾಗಿ ನ್ಯಾಯಾಧೀಶರು, ಪ್ರಸಿದ್ಧ ಶಸ್ತ್ರಚಿಕಿತ್ಸಕರು ಮತ್ತು ನೊಬೆಲ ಬಹುಮಾನ ಪಡೆದವರು ಚಿಕ್ಕಂದಿನಲ್ಲಿ ಹೆಚ್ಚಿನ ಬು. ಭಾ. ಉಳ್ಳವರಿರುತ್ತಾರೆ. ವಿಚಾರಮಾಡಿದರೆ ಜಗತ್ತಿನಲ್ಲಿಯ ಅರ್ಧದಷ್ಟು ಜನರು ಸರಾಸರಿ ಬು. ಭಾ. ಉಳ್ಳವರಿರುತ್ತಾರೆ. ಮನುಷ್ಯನ ಬುದ್ಧಿಮತ್ತೆಗೆ ವಂಶಪರಂಪರೆ ಬಹಳ ಮಟ್ಟಿಗೆ ಕಾರಣವಾಗುತ್ತದೆ; ವಾತಾವರಣವು ಅಷ್ಟೇನೂ ಮುಖ್ಯ ಪಾತ್ರವಹಿಸುವದಿಲ್ಲ; ವಹಿಸಿದರೂ ಕೇವಲ ನೂರಕ್ಕೆ ಹತ್ತರಷ್ಟು ಮಾತ್ರ ವ್ಯತ್ಯಾಸವನ್ನು ತರಬಲ್ಲದು. ಅಭಿರುಚಿ, ವ್ಯಕ್ತಿತ್ವ, ಇತ್ಯಾದಿಗಳ ಶೋಧಕ್ಕೆ ಬೇರೆ ಬೇರೆ ಪರೀಕ್ಷೆಗಳಿವೆ. ವ್ಯಕ್ತಿತ್ವ, ಪರೀಕ್ಷೆಯಿಂದ ಒಬ್ಬನು Subjective ಅಂತರ್ಮುಖನೋ ಅಥವಾ Objective ಬಹಿರ್ಮುಖನೋ ಎಂಬುದನ್ನು ನಿರ್ಣಯಿಸಬಹುದು. ಅಂತರ್ಮುಖನು ಏಕಾಕಿಯಾಗಿಬಯಸುವವನೂ ಬಹಿರ್ಮುಖನು ಜನರೊಡನೆ ಬೆರೆತುಕೊಂಡು ಹೋಗಬಯಸುವವನೂ ಆಗಿರುತ್ತಾನೆ; ಸಂಶೋಧಕನು ಮೊದಲ ಮಾದರಿಯವನಾದರೆ ವ್ಯಾಪಾರಿಯು ನೆಯ ಮಾದರಿಯವನು.

ಅಭಿರುಚಿಯ ಪರೀಕ್ಷಣದಿಂದ ಒಬ್ಬ ಮನುಷ್ಯನು ೬ ವರ್ಷ ಬೌದ್ಧಿಕ ವಯೋಮಾನ ಉಳ್ಳವನೂ ಬೆರಳು ಚುರುಕಿಲ್ಲದವನೂ ಆಗಿದ್ದರೆ ನೂಲನ್ನು ಪೊಟ್ಟಣ ಕಟ್ಟಿ ಜೀವಿತಾ ನಿರ್ವಹಣ ಮಾಡಬಲ್ಲನೆಂದೂ ಅವನು ಗಾಡಿ ಹೊಡೆದು ಸಾರಿಗೆ ಮಾಡಿ ಜೀವನ ನಡೆಸಲಾರನೆಂದೂ ಹೇಳಬರುತ್ತದೆ. ಹೀಗೇ ಇತರ ಫಲಿತಾಂಶಗಳಿಂದಲೂ ಭವಿಷ್ಯ ನಿರ್ಣಯಮಾಡಲಾಗುತ್ತದೆ.

ಹೀಗೆ, ಬುದ್ಧಿ ಪರೀಕ್ಷಣವು ಗಜಕಡ್ಡಿಯಂತೆ ಚಾಚೂತಪ್ಪದೆ ಭವಿಷ್ಯವನ್ನು ಅಳೆಯದಿದ್ದರೂ ಮನುಷ್ಯರ ಸಾಮಾನ್ಯ ಬುದ್ಧಿ ಗುಣಗಳನ್ನು ಪ್ರಯೋಜನಕ್ಕೆ ಬರುವಷ್ಟು ಮಟ್ಟಿಗೆ ಅಳೆದು ತೋರಿಸುತ್ತದೆ. ಇದರಿಂದ ಪ್ರತಿಯೊಬ್ಬನೂ ಜೀವನಾರಂಭದ ಅನೇಕ ಪ್ರಶ್ನೆಗಳಿಗೆ ನ್ಯಾಯವಾದ ಉತ್ತರಪಡೆಯಲಾಗುತ್ತದೆ.

## 'ಕಲ್ಯಾಣ ಕ್ರಾಂತಿ'

ಅಮೇರಿಕದಲ್ಲಿಂದು 'ಮದುವೆಯಾಗುವುದು' ಎಂದರೆ ಮದುವೆಯಲ್ಲ ಎಂದು ಡೇವಿಡ್ ಲೋವರು ಬರೆಯುತ್ತಾರೆ. ಇದೇನಿದು! ಎಂದು ಯಾರಾದರೂ ಗಾಬರಿಯಾಗುವುದು ಸಹಜವೇ ಇದೆ. ಅಲ್ಲಿ ಮದುವೆ ಎಂದರೆ ಒಂದು ಹುಡುಗಾಟವಾಗಿ ಹೋಗಿದೆ. ಅದಕ್ಕೆ ಬೆಲೆಯೇ ಇಲ್ಲ. ಐದರಲ್ಲಿ ಎರಡು ವಿವಾಹಗಳು ವಿಚ್ಛಿನ್ನವಾಗುತ್ತಿರುತ್ತವೆ. ಅಂದರೆ ತರುಣ ತರುಣಿಯರಿಗೆ ಕುಟುಂಬ, ಸಂತತಿ, ಸಮಾಜ, ರಾಜ್ಯ ಇವುಗಳ ಬಗ್ಗೆ ತಮ್ಮ ಕರ್ತವ್ಯವೇನೆಂಬುದರ ಅರಿವು ಲವಲೇಶವೂ ಇಲ್ಲದಂತಾಗಿ ಕೇವಲ ಸ್ವಾರ್ಥಿಗಳಾಗಿಬಿಟ್ಟಿದ್ದಾರೆ. ಇನ್ನೂ ಈ ಕೇವಲ ಸ್ವಾರ್ಥಸಾಧನೆಯೆಂಬುದು ಮಾನವ ಪ್ರಪಂಚಕ್ಕೆ ಅಸಹಜವಾದುದರಿಂದ ಅದರಲ್ಲೂ ಅವರು ಸೋತು ಆಮರಣಾಂತ ದುಃಖಿಗಳಾಗಿ [illegible] ಪುರಸ್ಕಾರವೇ ಕಾರಣ.

ಇದಕ್ಕೆ ವಿರುದ್ಧವಾಗಿ, ಹಿಂದುಸ್ತಾನದ ಮಧ್ಯಯುಗೀನ ವಿವಾಹ ಪದ್ಧತಿಯ ಪ್ರಕಾರ ಮದುವೆಯೆಂದರೊಂದು ಸುಖಾತೀತವಾದ ಧಾರ್ಮಿಕ ಕಾರಾವಾಸವೆಂದು ಅನೇಕ ತರುಣ ತರುಣಿಯರಿಗೆ (ಹೆಚ್ಚಾಗಿ ೨ ನೆಯವರಿಗೆ) ಎನಿಸುವಂತಾಯಿತು. ಈ ಎರಡೂ ಅತ್ಯವಸ್ಥೆಗಳೇ ಸರಿ. ಅತಿಸ್ವಾತಂತ್ರ್ಯವೆಂದರೆ ಸ್ವಾಚ್ಛಂದ್ಯ, ಅತಿಯಾಗಿ ಧರ್ಮ ಹಿರಿಯರು ಇಲ್ಲವೆ ಇತರ ವ್ಯಕ್ತಿ ಇಲ್ಲವೆ ತತ್ವಕ್ಕೆ ದಾಸರಾಗಿರುವುದೆಂದರೆ ವ್ಯಕ್ತಿತ್ವನಾಶವೇ ಸರಿ. ಈ ಎರಡು ಅತಿಕೋಟಿಗಳ ನಡುವಣ ಸಮತೋಲವನ್ನು ಸಾಗಿಸಿಕೊಂಡು ಹೋಗುವುದರಲ್ಲೇ ಮಾನವನ ಜಾಣತನವಿದೆ. ವನವಾಸದಲ್ಲಿರುವ ಭೀಕರ ಶಾಂತಿ; ಪಟ್ಟಣವಾಸದಲ್ಲಿರುವ ಅಸಹ್ಯ ಅಶಾಂತಿ ಈ ಎರಡರ ಮಧ್ಯಾವಸ್ಥೆಯಂತೆ ಸ್ವಾಚ್ಛಂದ್ಯ, ಪಾರತಂತ್ರ್ಯಗಳ ನಡುವಣ ಸ್ವಾತಂತ್ರ್ಯ ದಶೆಯನ್ನು ಸಾಧಿಸಿಕೊಳ್ಳುವ ಕಲೆಯನ್ನು ಕಲಿಸದೆ ವಿವಾಹಾದಿ ಯಾವ ಸಾಮಾಜಿಕ ಪದ್ಧತಿಯೂ ಮಾನವ ಹೃದಯಕ್ಕೆ ತೃಪ್ತಿಕೊಡುವ ಮಟ್ಟಕ್ಕೆ ಬರಲಾರದು.

ವಿವಾಹದ ನಿಜವಾದ ಗುಟ್ಟೆಂದರೆ ಗಂಡಸು ಗಂಡಸಾಗಿ ವರ್ತಿಸಬೇಕು, ಜೊತೆಗಾರನೂ ವಿಚಾರಪರನೂ ಆಗಿ ನಡೆದುಕೊಳ್ಳಬೇಕು. ಮತ್ತು ಹೆಂಗಸು ಹೆಂಗಸಾಗಿ ವರ್ತಿಸಬೇಕು, ಮಾನವ ಹೃದಯವನ್ನು ಮಿದುಗೊಳಿಸುವ ಹೃದಯ ಸೌಂದರ್ಯವನ್ನು ತೋರಬೇಕು, ಕೌಟುಂಬಿಕ ಪ್ರೀತಿಯ ಮೂಲಕ ಪ್ರಚೋದನೆಗೊಂಡು ಕಾರ್ಯಪ್ರವೃತ್ತಳಾಗಬೇಕು. ಇದು ತಪ್ಪಿದ್ದೇ ಅಮೇರಿಕದ ಕುಟುಂಬ ಸುಖ ಹಾನಿಗೆ ಕಾರಣ. ಹುಡುಗಾಟಿಕೆಯ ಬುದ್ಧಿಯಿಂದ ಹೆಂಡತಿಯನ್ನು ತಾಯಿಯೆಂದೂ ಮಕ್ಕಳನ್ನು ಅಣ್ಣ ತಂಗಿಯರೆಂದೂ ಕರೆವ ಗಂಡನ ಬುದ್ಧಿಯೇ ಅವನ ಅಜ್ಞಾನವನ್ನು ವಿಶದಪಡಿಸುತ್ತದೆ ಇದು ಹಾಸ್ಯವಲ್ಲ, ಅವನ ಬುದ್ಧಿಯೇ ಹಾಗೆ ಹೊಣೆಗೆಟ್ಟು ಪರಾತ್ರಯಕ್ಕೆ ಕೈಚಾಚಿದೆ! ಮಾತೃವಾತ್ಸಲ್ಯವನ್ನು ಹೆಂಗಸು ಮಕ್ಕಳಲ್ಲಿ ಪ್ರದರ್ಶಿಸಿ ತೃಪ್ತಿಹೊಂದಿದಾಗ ಗಂಡನು ಮಗುವಿನಂತೆ ವರ್ತಿಸಿದರೆ ಪರಿಣಾಮವೇನಾದೀತು? ಅವಳಿಗೆ ಬೇಸರ— ಆ ಮೂಲಕ ವಿವಾಹ ವಿಚ್ಛೇದ!

ತದ್ವಿರುದ್ಧವಾಗಿ ಹಿಂದುಸ್ತಾನದಲ್ಲಿಯ ಹೆಂಗಸಿನಂತೆ ಗಂಡನು ತಂದೆಯಂತೆ ಲಾಲನೆಮಾಡಬೇಕೆಂದು ಬಯಸಿ ಕಾರ್ಯ, ಬುದ್ಧಿ, ಭಾವನೆ– ಈ ಎಲ್ಲದರಲ್ಲೂ ಪರಾವಲಂಬಿಯಾದರೆ ಸ್ವಾಭಾವಿಕವಾಗಿ ಗಂಡನಿಗೆ ಬೇಸರಬರುತ್ತದೆ– ವಿಚ್ಛೇದದ ಕಾಯದೆಯ ಸವಲತ್ತು ಸಿಕ್ಕಿದರೆ ಕೂಡಲೆ ಅವನದನ್ನು ಬಳಸಿಬಿಡದಿರನು!

ಆದುದರಿಂದ ವಿವಾಹವಾಗುವ ವಯಸ್ಸಿನ ತರುಣ ತರುಣಿಯರಿಗೆ ವಿವಾಹದ ಗೊತ್ತುಗುರಿ; ಲಾಭ ನಷ್ಟ ಹಕ್ಕುಹೊಣೆ— ಈ ಎಲ್ಲವನ್ನು ತಿಳಿಸುವ ಕರ್ತವ್ಯವನ್ನು ತಾಯ್ತಂದೆ, ಗುರುಹಿರಿಯರು ಪಾಲಿಸದಿರುವುದು ಅವರ ತಪ್ಪಲ್ಲವೆ? ಹಿಂದುಸ್ತಾನದ ಹಿರಿಯರು, ವೃದ್ಧರು, ಅಧಿಕಾರ ಪಿಪಾಸಾರ್ದಿತರು ಇತ್ತಕಡೆ ಲಕ್ಷ್ಯ ಕೊಡುವರೆ?

## ನಾಗರಿಕರ ಅಜ್ಞಾನ

ಪ್ರಜಾಧಿಕಾರವನ್ನು ನೆಲೆಗೊಳಿಸಲು ಇಂದು ನಾಡುಗಳು ಹೆಣಗುತ್ತಿವೆ. ಪ್ರಜೆಗೆ ಅಧಿಕಾರ ನಿರ್ವಹಣ ಶಕ್ತಿ ಬರಲು, ಅರ್ಹತೆ ಬರಲು ಅವನಲ್ಲಿ ಪ್ರಜಾಧರ್ಮ, ನಾಗರಿಕತನ ಬೆಳೆದುಬಂದಿರಬೇಕು. ಪ್ರಜೆಯು ಅಪ್ರಬುದ್ಧಾವಸ್ಥೆಯಿಂದ ಪ್ರಬುದ್ಧಾವಸ್ಥೆಗೆ ಬರಲು ಅವನಿಗೆ (ಳಿಗೆ) ಪ್ರಜಾತಂತ್ರದ ಜ್ಞಾನ ಅವಶ್ಯಕ. ಈ ಜ್ಞಾನಾರ್ಜನೆಗೆ ತಕ್ಕ ಸಾಧನಗಳಾವುವೆಂಬ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ವಿದ್ಯೆ ಕಲಿಸಬೇಕು ಎಂಬುದೊಂದು ಮಾರ್ಗ ಕೇವಲ ಅಕ್ಷರ ವಿದ್ಯೆಯಿಂದ ಉದ್ದೇಶ ಸಾಧಿಸಲು, ಶೀಘ್ರ ಒಂದಾಮುಕ್ಕೆ ಶ್ರವಣ ಸಾಧನ ಅಗತ್ಯ ಎಂಬುದಿನ್ನೊಂದು ಮತ. ಈ ಸಾಧನ ಭೇದಗಳೆಲ್ಲವನ್ನೂ ಪ್ರಜೆಗೆ ದೊರೆವಂತೆ ಮಾಡುವದು ಸರಕಾರದ ಕರ್ತವ್ಯವೆಂಬುದು ಬಹು ಜನರ ಅಭಿಪ್ರಾಯ. ಆದರೆ ಸದ್ಯದಲ್ಲಿ ಇರುವ ಸಾಧನಗಳನ್ನು ಯಾವ ರೀತಿಯಿಂದ ಬಳಸಿಕೊಳ್ಳಲಾಗುತ್ತಿದೆ ಎಂಬುದರತ್ತ ಲಕ್ಷ್ಯವಿತ್ತರೆ ನೋರೆಯನ್ನು ತಪ್ಪೆ ಮಾಡಿಕೊಳ್ಳಬೇಕಾಗುತ್ತದೆಂದು 'ನ್ಯಾಶನಲ್ ಮುನಿಸಿಪಲ್ ರಿವ್ಯೂ'ದಲ್ಲಿ ಜಾರ್ಜ್ ಎಚ್. ಗೆಲ್ಲಪ್ಪನು ಬರೆಯುತ್ತಾನೆ.

ಪ್ರಜಾತಂತ್ರದಲ್ಲಿ ಚುನಾವಣೆ ಪ್ರಧಾನವಾದುದು ಪ್ರತಿನಿಧಿಗಳ ಯೋಗ್ಯತೆಯನ್ನು ನಿರ್ಣಯಿಸಿ ಪ್ರಾಮಾಣಿಕತೆಯಿಂದ ಆರಿಸುವ ಬುದ್ಧಿ ಸಂಸ್ಕಾರಗಳನ್ನು ನಾಗರಿಕನು (ಳು) ಅಳವಡಿಸಿಕೊಂಡಲ್ಲದೆ ಪ್ರಜಾಸತ್ತೆ ಸಾರ್ಥಕವಾಗದು.

ಕೇವಲ ಪ್ರಚಾರದಿಂದ ಏನೂ ಸಾಧಿಸದು ಎಂಬುದು ನಿಜವಾದರೂ ಅದು 'ಶ್ರೋತವ್ಯ,' ಎಂದರೆ ಮೊದಲ ಮೆಟ್ಟಲು. ಅದು ಕೊಟ್ಟ ವಿಷಯವನ್ನು ನಾಗರಿಕರು ವಿಚಾರಕ್ಕೆ ತೆಗೆದುಕೊಂಡು 'ಮಂತವ್ಯ' ಎಂಬ ಮಾತನ್ನು ನಡೆಸಿ ಅನಂತರ 'ನಿದಿಧ್ಯಾಸಿತವ್ಯ' ಎಂದರೆ ನ್ಯಾಯ ನಿರ್ಣಯಮಾಡಿ ಅದನ್ನು ನೆನಪಿನಲ್ಲಿಟ್ಟುಕೊಂಡು ಆಚರಣೆಯಲ್ಲಿ ತರತೊಡಗುವದು. ನಾಡಿನ ವಿದ್ವಾಂಸರೂ ಸರಕಾರವೂ ಸಹಕರಿಸಿ ಜನತಾ ಶಿಕ್ಷಣವು ಈ ಉದ್ದೇಶವನ್ನು ಸಾಧಿಸುವಂತೆ ನೆರವೀಯಬೇಕು. ಕೇವಲ ಇಂದಿನ ಸಾಮಾನ್ಯ ವಿದ್ಯಾಭ್ಯಾಸ' ಇಲ್ಲವೆ 'ವಿಶೇಷ ಕಲೆವಿಜ್ಞಾನದ ವಿದ್ಯಾಭ್ಯಾಸ' ದಿಂದ ನಾಗರಿಕತ್ವ ಪುಷ್ಟವಾಗದೆಂಬುದಕ್ಕೆ ಅನೇಕ ರಾಷ್ಟ್ರಗಳು ನಿದರ್ಶನವಾಗಿ ನಿಂತಿವೆ. ನಮ್ಮನ್ನು ನಾವೇ ಆಳಿಕೊಳ್ಳುವುದು ಇತರರ ಒಳ್ಳೆಯ ಆಳ್ಕೆಗಿಂತ ಉತ್ತಮವೆಂಬುವದು ಔಪಾಧಿಕ ಸತ್ಯ (Conditional truth). ನಮ್ಮನ್ನು ನಾವು ಇತರರ ಒಳ್ಳೆಯ ಆಳ್ಕೆಗೆ ಸರಿಸಮನಾಗಿ ಇಲ್ಲವೆ ಇನ್ನು ಉತ್ತಮವಾಗಿ ಆಳಿಕೊಳ್ಳಬೇಕೆಂಬುದು ಪ್ರಜಾ ಸರಕಾರದ ಧ್ಯೇಯವಾಗಿದ್ದರೆ ಮಾತ್ರ ಸ್ವರಾಜ್ಯವೆಂಬ ಮಾತಿಗೆ ಬೆಲೆಯಿದೆ. ಹಾಗಲ್ಲದಲ್ಲಿ ಸುರಾಜ್ಯವೇ ಸ್ವರಾಜ್ಯಕ್ಕಿಂತ ಉತ್ತಮವೆಂದು ಬುದ್ಧಿವಂತರು ಒಪ್ಪಿಕೊಳ್ಳಬೇಕಾಗುತ್ತದೆ. ಈ ವಿಚಾರವನ್ನು ಬೆಳೆಸಿಕೊಂಡ ಪ್ರಜೆಯಲ್ಲದೆ ಅನ್ಯನು ಪ್ರಜಾಸತ್ತೆಗೆ ಅರ್ಹನಲ್ಲ. ಅರ್ಹರಲ್ಲದವರ ಕೈವಾಡದ ಆಳಿಕೆ ಅರಾಜಕತೆಯೆನಿಸೀತಲ್ಲದೆ ಆಳಿಕೆಯೆನಿಸಲಾರದು.

ಆಧುನಿಕ ಸಾಧನವಾದ ರೇಡಿಯೋದ ಮೂಲಕ ಜಗತ್ತಿಂದು ಅನೇಕ ವಿಧದ ಲಾಭಪಡೆದಿದೆ. ಅಮೇರಿಕದ ೪ ಕೋಟಿ ಮನೆಗಳಲ್ಲಿ ಊಟದ ಕಾಲದ ಮೋಜಿಕತೆಯನ್ನು ಬಿತ್ತರಿಸಲಾಗುವುದಂತೆ ಇದರಿಂದ ನಡೆನುಡಿಗಳನ್ನು ರಸಿಕತೆಯನ್ನು, ಸಭ್ಯತೆಯನ್ನು ಆ ಮಾದರಿಯಿಂದ ಕಂಡು ಕಲಿತು ನಲಿಯಲು ಪ್ರಜೆಗಳಿಗೆಷ್ಟು ಅನುಕೂಲ ಸಿಕ್ಕಿದಂತಾಯಿತು. 'ಸತ್ಯವನ್ನು ತಿಳಿದಾಗ ನೀನು ಸ್ವತಂತ್ರನಾಗುವಿ' ಎಂಬ ಬೈಬಲ್ಲಿನ ಮಾತು ಸತ್ಯವಷ್ಟೇ ಸತ್ಯ. ಅದನ್ನು ಅರಗಿಸಿಕೊಳ್ಳುವುದೇ ಪ್ರಜಾಶಕ್ತಿ ಸಾರ್ಥಕವಾಗುವ ಬಗೆ. ಆದುದರಿಂದ 'ನಹಿ ಜ್ಞಾನೇನ ಸದೃಶಂ' ಎಂಬುದರಲ್ಲಿ ನಂಬಿಗೆಯುಳ್ಳವರೆಲ್ಲ ನಾಗರಿಕರ ಇಂದಿನ ಅಜ್ಞಾನವನ್ನು ಕಳೆಯಲು ಜೀವನ ವಿಜ್ಞಾನವನ್ನಿತ್ತು ಸಹಾಯ ಮಾಡಬೇಕಾಗಿದೆ. ಪ್ರಗತಿಶೀಲರಿತ್ತ ಗಮನಿಸುವರೊ?

## ಹೆಪ್ಪಳಿಕೆ

ಶೆಫೀಲ್ಡಿನ ಡಾ. ರಾಬರ್ಟ ಡಬ್ಲ್ಯು ಲಾಸನ್ನರು ಹೆಪ್ಪಳಿಕೆ ಕಣ್ಣು ಮುಚ್ಚಿತೆರೆವುದು ಏಕೆ ಸಂಭವಿಸುತ್ತದೆಂಬ ಬಗ್ಗೆ ಸಂಶೋಧನ ನಡೆಸಿದ್ದಾರೆ; ಜನರ ದೈನಂದಿನ ಆಟಪಾಟಗಳಲ್ಲಿ ಅದರ ಪರಿಣಾಮವೇಂತಹದೆಂಬುದನ್ನು ಪರಿಶೀಲಿಸಿದ್ದಾರೆ.

ಕಣ್ಣನ್ನು ಮುಚ್ಚಿತೆರೆವ ಅಥವಾ ಎವೆಯಿಕ್ಕುವ ಕಾಲಾವಧಿ ಮನುಷ್ಯರಲ್ಲಿ ಭಿನ್ನ ಭಿನ್ನವಾಗಿರುತ್ತದೆ. ಮನುಷ್ಯರನ್ನು ನಾಲ್ಕು ಬಗೆಗಳಾಗಿ ವಿಂಗಡಿಸಿ, ಮೊದಲನೆಯದಾದ 'ಜೆ' ವರ್ಗದಲ್ಲಿ ಗಂಡಸರು ೨.೮ ಸೆಕಂಡುಗಳಿಗೊಮ್ಮೆಯೂ ಹೆಂಗಸರು ೪ ಸೆಕಂಡುಗಳಿಗೊಮ್ಮೆಯೂ ಕಣ್ಣು ರೆಪ್ಪೆ ಮುಚ್ಚುತ್ತಾರೆ; 'ಪ್ಲೇಟೋ' ವರ್ಗದಲ್ಲಿ ಸಾಮಾನ್ಯವಾಗಿ ೧೨ ಸೆಕಂಡುಗಳಿಗೊಮ್ಮೆ ಕಣ್ಣೆವೆ ಜಾರುತ್ತದೆ; 'ಬೈಮೋಡಲ್' ವರ್ಗದಲ್ಲಿ ಸರಾಸರಿ ೩.೬ ಸೆಕಂಡುಗಳಲ್ಲಿ ಒಮ್ಮೆ ರೆಪ್ಪೆ ಬಡಿತವಿದೆ; ಅತಿವಿರಳವಾದ 'ಸಿಮೆಟ್ರಿಕಲ್' ವರ್ಗದವರು ೫.೮ ಸೆಕಂಡುಗಳಿಗೊಮ್ಮೆ ಕಣ್ಣು ಮುಚ್ಚಿತೆರೆಯುತ್ತಾರೆ.

ಭಯಾದಿಗಳಿಂದ ನರಸ್ಪಂದನ ಹೆಚ್ಚಿದಾಗ ಹೆಪ್ಪಳಿಕೆಯ ಗತಿ ತೀವ್ರತರವಾಗುವುದು. ಹೆಪ್ಪಳಿಕೆಯಲ್ಲಿ ರೆಪ್ಪೆ ಮುಚ್ಚಲು ೦.೦೫ ಸೆಕಂಡು ಬೇಕಾಗುತ್ತದೆ. ಅನಂತರ ಅದು ೦.೭೫ ಸೆಕಂಡಿನವರೆಗೆ ಮುಚ್ಚಿರುತ್ತದೆ; ತೆರೆಯುವುದಕ್ಕೆ ಮತ್ತೆ ೦.೨೦ ಸೆಕಂಡುಗಳು ಹಿಡಿಯುವವು. ೦.೩ ಸೆಕಂಡುಗಳ ಕಾಲ ಕಣ್ಣೆದುರು ಕಪ್ಪುಕಟ್ಟಿರುತ್ತದೆ. ಮತ್ತೆ ೦.೨೫ ಸೆಕಂಡು ಕಾಲ ರೆಪ್ಪೆಯ ಚಲನದಿಂದ ದೃಷ್ಟಿಭಂಗವುಂಟಾಗುತ್ತದೆ.

ಬಹುಸಂಖ್ಯಾಕರಾದ "ಜೆ" ಮಾದರಿಯ ಗಂಡಸರಲ್ಲಿ ಪ್ರಾಕೃತಿಕ ಇಲ್ಲವೆ ಸಂಪೂರ್ಣವಾಗಿ ಕಣ್ಣುಗಳು ಗಂಟೆಗೆ ೧೨ ಮಿನಿಟುಗಳ ಕಾಲ ಮುಚ್ಚಿರುತ್ತವೆ. ಹೆಪ್ಪಳಿಕೆಯಿಂದ ಗಂಟೆಗೆ ೬½ ನಿಮಿಷಗಳ ವರೆಗೆ ಇವರ ಕಣ್ಣಿಗೆ ಕಪ್ಪುಕಟ್ಟಿರುತ್ತದೆ. ಕಪ್ಪುಕಟ್ಟುವ ಮತ್ತು ರೆಪ್ಪೆಯ ಚಲನದ ಕಾಲಾವಧಿ ಸರಾಸರಿ ನೂರಕ್ಕೆ ೨೦ ರಷ್ಟಾಗುತ್ತದೆ; 'ಪ್ಲೇಟೋ' ಮಾದರಿಯಲ್ಲಿ ನೂರಕ್ಕೆ ೪.೬ ರಷ್ಟಾಗುತ್ತದೆ.

ಸಾಮಾನ್ಯ ವಿಚಾರದಂತೆ ಹೆಚ್ಚುಸಲ ಹೆಪ್ಪಳಿಸುವುದು ಮನೋದೌರ್ಬಲ್ಯದ, ನರದೌರ್ಬಲ್ಯದ, ದೃಷ್ಟಿ ದೌರ್ಬಲ್ಯದ ಲಕ್ಷಣ ಆದರೆ ಕಡಿಮೆ ಸಲ ಹೆಪ್ಪಳಿಸುವುದು ಮನಃಸ್ವಾಸ್ಥ್ಯದ ಲಕ್ಷಣವೂ ಆಗಬಹುದಾಗಿದೆ. ಸಾಮಾನ್ಯವಾಗಿ ಕಡಿಮೆ ಸಲ ಹೆಪ್ಪಳಿಸುವವರ ಕಣ್ಣು ಚುರುಕಿರುತ್ತದೆ. ತೀಕ್ಷ್ಣವಿರುತ್ತದೆಯೆಂದು ಹೇಳಬಹುದು. ಹೆಚ್ಚುಸಲ ಕಣ್ಮುಚ್ಚಿ ತೆರೆವವರು ಚಂಚಲರೆಂದೂ ತೀರ್ಮಾನಿಸಬಹುದು. ಹಾಗೆ ಗಾಳಿಯಿಲ್ಲದಲ್ಲಿ ಉರಿವ ದೀಪದಂತೆ ಸ್ಥಿರಚಿತ್ತತೆಯನ್ನು ಕಡಿಮೆಕಾಲ ಹೆಪ್ಪಳಿಸುವವರಿಗೆ ಹಚ್ಚಿ ಅದೇ ಮರುಕ್ಷಣದಲ್ಲಿ ಕಲ್ಲಿನಂಥ ಮಾನಸಿಕ ನಿಷ್ಕ್ರಿಯತೆಯನ್ನು ಅವರಿಗೆ ಹಚ್ಚಬಹುದು. ಆದರೆ ಕಣ್ಣಿನ ಕಾರ್ಯದಿಂದ ಇಂಗಿತಜ್ಞರು ಸಾಧಾರಣವಾಗಿ ಹೃದಯಸತ್ವವನ್ನು ಓದುತ್ತಾರೆ. ಏಕೆಂದರೆ, ಕಣ್ಣು ಹೃದಯದ ಕನ್ನಡಿ!



ಬ್ರಿಟನ್ನಿನಲ್ಲಿ ಹಿಂದೀ ವಿದ್ಯಾರ್ಥಿಗಳ ವೈಮಾನಿಕ ವಿದ್ಯಾಭ್ಯಾಸ: ಹಿಂದೀ ಸರಕಾರದಿಂದ ಕಳಿಸಲ್ಪಟ್ಟ ಎಂ. ಆರ್. ರಿಜವಿಯವರಿಗೆ ಬೆಡ್‌ಫೋರ್ಡ್‌ಶಾಯರಿನ ವೈಮಾನಿಕ ವಿದ್ಯಾಲಯದಲ್ಲಿ ಮುಖ್ಯ ವೈಮಾನಿಕ ರಾಬರ್ಟಸನ್ನರು ವಿಷಯ ವಿವರಿಸುವದು.

# ಸಂಪಾದಕೀಯ ಟೀಕೆಟಿಪ್ಪಣಿಗಳು

## ವ್ಯಾಪಾರಸ್ಥರ ಹೊಣೆ

ಯುದ್ಧ ಕಾಲದಲ್ಲಿ ಇದ್ದ ನಿಯಂತ್ರಣದಿಂದ ವ್ಯಾಪಾರಸ್ಥರ ವ್ಯಾಪಾರವೇ ಕಟ್ಟಾಗಿದ್ದರಿಂದ ನಿಯಂತ್ರಣವನ್ನು ತೆಗೆಯಿರೆಂದು ಎಲ್ಲೆಡೆಯಿಂದ ಒತ್ತಾಯಮಾಡಲ್ಪಟ್ಟಿತ್ತು; ಸರಕಾರದವರೂ ನಿಯಂತ್ರಣವನ್ನು ತೆಗೆದು ಹಾಕಿದರು. ಸರಕಾರೀ ಅಧಿಕಾರಿಗಳ ವಿರೋಧವನ್ನು ಲೆಕ್ಕಿಸದೆ ಗಾಂಧೀಜಿಯವರ ಒತ್ತಾಯಕ್ಕಾಗಿ ಸರಕಾರದವರು ಈ ಧೋರಣವನ್ನು ಸ್ವೀಕರಿಸಿದರು. ವ್ಯಾಪಾರಸ್ಥರು ತಮ್ಮ ಹೊಣೆಯನ್ನರಿತುಕೊಂಡು ವರ್ತಿಸುವರೆಂದು ಆಶಿಸಲಾಗಿದ್ದಿತು. ಆದರೆ ವ್ಯಾಪಾರಸ್ಥರು ಲಾಭಬಡಕರಾಗಿ ಮನಬಂದಂತೆ ಧಾರಣೆಗಳನ್ನು ಏರಿಸಿ ಹೊರಗೆ ಧಾನ್ಯಗಳನ್ನು ಕಳಿಸಿಬಿಟ್ಟದ್ದರಿಂದ ಈಗ ಪರಿಸ್ಥಿತಿ ಹದಗೆಟ್ಟಂತಾಗಿದೆ. ಧಾರಣೆ ೧೦೦ ಕ್ಕೆ ೧೮೦ ರಷ್ಟು ಏರಿದ್ದರಿಂದ ಜನ ಕಂಗಾಲಾಗಹತ್ತಿದೆ. ಆಚೆ ವಾರ ಧಾರವಾಡ ಕಲೆಕ್ಟರರು ಪತ್ರಿಕಾ ಪರಿಷತ್ತಿನಲ್ಲಿ ಧಾರಣೆಗಳು ಇಳಿಯಬಹುದೆಂದು ಆಶಿಸಿದ್ದರು. ಆದರೆ ಅವರ ಆಸೆ ಫಲಿಸಲಿಲ್ಲ. ಕಳೆದ ವಾರಕ್ಕಿಂತ ಈ ವಾರ ಧಾರಣೆ ಏರಿವೆ. ನಿಯಂತ್ರಣಗಳನ್ನು ತೆಗೆದು ಹಾಕಿದ ಬಳಿಕ ಸರಕಾರದವರು ಕಾಳು ಎತ್ತುವ ಯೋಜನೆಯನ್ನು ಕೈಕೊಳ್ಳದ್ದರಿಂದ ಅವರ ಹತ್ತರ ಹೆಚ್ಚಿಗೆ ಕಾಳಿನ ಸಂಗ್ರಹವಿಲ್ಲ. ಹೊರಗಿನಿಂದ ಬರುವ ಮತ್ತು ಶಿಲ್ಲಕು ಇದ್ದ ಧಾನ್ಯಗಳನ್ನು ಸೀಡಾ ಪ್ರದೇಶಗಳಿಗಾಗಿ ಕಾಯ್ದಿಡಬೇಕಾಗುತ್ತದೆ. ಇದರಿಂದ ಸೀಡೇತರ ಪ್ರದೇಶಗಳೆಲ್ಲ ಒಂದು ಬಗೆಯಿಂದ 'ಪರದೇಶಿ'ಯಾಗಿವೆ. ಅಗ್ಗದರದ ಅಂಗಡಿಗಳನ್ನು ತೆರೆದು ಧಾರಣೆಗಳನ್ನು ಸ್ತಿಮಿತದಲ್ಲಿ ತರುವ ಯೋಜನೆಯನ್ನು ಸರಕಾರವೀಗ ಮಾಡಿದೆ. ವ್ಯಾಪಾರಸ್ಥರು ನಾಗರಿಕರು ಕೂಡಿಕೊಂಡು ಸರಕಾರದ ಸಹಾಯದಿಂದ ಸಂಘವೊಂದನ್ನು ಸ್ಥಾಪಿಸಿಕೊಂಡು ಯೋಗ್ಯ ದರಗಳಲ್ಲಿ ಆಹಾರ ಪದಾರ್ಥಗಳನ್ನು ಪೂರಯಿಸುವದು ಆವಶ್ಯವಾಗಿದೆ. ಇಂಥದೊಂದು ಸಂಸ್ಥೆ ಹುಬ್ಬಳ್ಳಿಯಲ್ಲಿ ಇದೇ ತಾನೆ ಸ್ಥಾಪಿತವಾಗಿದೆ. ಈ ಸಂಘದವರಿಗೆ ಸರಕಾರದವರು ಧನ ಸಹಾಯಮಾಡುವುದಲ್ಲದೆ ಸಾರಿಗೆಯ ಅನುಕೂಲತೆಗಳನ್ನೆಲ್ಲ ಒದವಿಸಿ ಕೊಡುವದಾಗಿ ಆಶ್ವಾಸನವನ್ನು ಕೊಟ್ಟಿದ್ದಾರೆ. ಇಷ್ಟೆಲ್ಲ ಸೌಕರ್ಯಗಳನ್ನು ಸರಕಾರದವರು ಒದವಿಸುವಾಗ ವ್ಯಾಪಾರಸ್ಥರು ತಮ್ಮ ಹೊಣೆಯನ್ನರಿತು ಯೋಗ್ಯ ದರದಿಂದ ಕಾಳುಗಳನ್ನು ಮಾರುವದು ಧರ್ಮವಾಗಿದೆ. ಗಾಂಧೀಜಿಯ ಮತ್ತು ರಾಷ್ಟ್ರೀಯ ಸರಕಾರದ ಉದಾರ ಧೋರಣದಿಂದ ವಿನಿಯಂತ್ರಿತವಾದ ವ್ಯಾಪಾರದಿಂದ ಕೇವಲ ಲಾಭದತ್ತ ಎಂಸದೆ ಜನರಿಗಾಗಿದ್ದ ತಮ್ಮ ಕರ್ತವ್ಯವನ್ನು ಅವರು ಮಾಡಲು ಮುಂದಾಗುವರೆಂದು ನಂಬಿದ್ದೇವೆ.

## ಹೈದರಾಬಾದ ಸಮಸ್ಯೆ

ಹೈದರಾಬಾದ ಸಮಸ್ಯೆಯು ದಿನ ದಿನಕ್ಕೆ ಬಹಳ ಜಟಿಲವಾಗುತ್ತನಡೆದಿದೆ. ಇತ್ತೆಹಾದುಲ್ ಸಂಸ್ಥೆಯವರ ಪುಂಡಾಟಿಕೆಯನ್ನು ತಡೆಯಲು ನಿಜಾಮ ಸಾಹೇಬರು ಮುಂದಾಗದೆ, ಪ್ರತ್ಯಕ್ಷ ಅಪ್ರತ್ಯಕ್ಷ ರೀತಿಯಿಂದ ಆ ಸಂಸ್ಥೆಯವರಿಗೆ ಪ್ರೋತ್ಸಾಹನೆ ಕೊಡುತ್ತಿರುವದರಿಂದ ಆ ಸಂಸ್ಥೆಯಲ್ಲಿಯ ಪುಂಡರ ಏರಾಟಿಕೆಗೆ ಮರ್ಯಾದೆ ಇಲ್ಲದಂತಾಗಿದೆ. ಇದೇ ೯ ನೆಯ ತಾರೀಕಿನ ದಿವಸ ಈ ಸಂಸ್ಥೆಯ ಅಧ್ಯಕ್ಷರ ಆಜ್ಞೆಯಿಂದ ಸಾವಿರ ಗಟ್ಟಲೆ ರಜಕಾರರು ಬಂದೂಕು ಬರ್ಚಿ ಲಾಠಿ ಮೊದಲಾದವುಗಳಿಂದ ಸುಸಜ್ಜಿತರಾಗಿ ಹೈದರಾಬಾದದಲ್ಲೆಲ್ಲ ಕೂಚುಮಾಡುತ್ತ ರಜಕಾರ ದಿನವನ್ನು ಆಚರಿಸಿದರು. ಈ ಸಮಯದಲ್ಲಿ ಭಾಷಣ ಮಾಡುತ್ತ ರಜಕಾರ ಸಂಸ್ಥೆಯ ಅಧ್ಯಕ್ಷರಾದ ಕಾಶೀಂ ರಜವಿಯವರು ಹಿಂಸೆ ಕೊಲೆಗಳಲ್ಲಿ ಉದ್ಯುಕ್ತವಾಗಲು ಜನತೆಯನ್ನು ಪ್ರಚೋದಿಸುವಂಥ ಭಾಷಣ ಮಾಡಿದರೆಂದು ವರದಿಯಾಗಿದೆ. ಹಿರಿಯೋಲಗದಲ್ಲಿ ಈ ಸಂಬಂಧದಲ್ಲಿ ಬಂದ ಚರ್ಚೆಗೆ ಉತ್ತರ ಕೊಡುತ್ತ ಮುಖ್ಯ ಮಂತ್ರಿಗಳಾದ ಪಂಡಿತ ಜವಾಹರಲಾಲರು ಅದನ್ನು ತೀವ್ರ ಖಂಡಿಸಿದರಲ್ಲದೆ ಇಂಥ ಕೆಟ್ಟ ಭಾಷಣವನ್ನು ತಾವೆಂದೂ ಕೇಳಿರಲಿಲ್ಲೆಂದು ಹೇಳಿದರು. ಆದರೆ ನಿಜಾಮ ಸರಕಾರದವರು ಈ ಬಗ್ಗೆ ಮುಖ್ಯಮಂತ್ರಿಗಳಿಗೆ ತಂತಿಯೊಂದನ್ನು ಕಳಿಸಿ ರಜವಿಯವರು ಯಾವ ಭಾಷಣವನ್ನೂ ಮಾಡಿಲ್ಲ, ಶಸ್ತ್ರಾಸ್ತ್ರಗಳ ಸಪ್ತಾಹವೂ ಜರುಗಿಲ್ಲ. ಈ ಬಗ್ಗೆ ತಪ್ಪು ವರದಿಯಾಗಿದ್ದು ಅದರ ಸಂಬಂಧದಲ್ಲಿ ಭಾರತ ಸರಕಾರವೇ ವಿಚಾರ ನಡೆಸಬೇಕೆಂದು ಮುಂತಾಗಿ ತಿಳಿಸಿರುವರು. ಇದನ್ನು ಕೇಳಿ ಯಾರಿಗಾದರೂ ಆಶ್ಚರ್ಯವಾಗದಿರದು. ಪಂಡಿತ ಜವಾಹರಲಾಲರು ಈಗಾಗಲೆ ಈ ಬಗ್ಗೆ ಉತ್ತರ ಕೊಡುತ್ತ ಶಸ್ತ್ರಾಸ್ತ್ರ ಸಪ್ತಾಹ ನಡೆದ ಬಗ್ಗೆ ರಜವಿಯವರು ಭಾಷಣ ಮಾಡಿದ್ದರ ಬಗ್ಗೆ ಪುರಾವೆಗಳನ್ನು ತೋರಿಸಿ ಕೊಟ್ಟಿರುವರು. ಏಪ್ರಿಲ ಒಂದರ ನಿಜಾಮ ಗ್ಯಾಜೆಟ್ಟಿನಲ್ಲಿಯೆ ಕೂಚು ಸಲಾಮ-ಮತ್ತು ಮಿಲಿಟರಿ ಕಾರ್ಯಕ್ರಮಗಳಾದವೆಂದು ಉಲ್ಲೇಖವಾಗಿದೆ. ಇದಕ್ಕೆ ಕಾಶೀಂ ರಜವಿ, ವಿದೇಶ ಸುದ್ದಿಗಾರ ಮತ್ತು ಇತರರು ಬಂದಿದ್ದರೆಂದೂ ಆ ಗ್ಯಾಜೆಟಿನಲ್ಲಿಯೆ ಪ್ರಸಿದ್ಧವಾಗಿದೆ. ಅವರ ಭಾಷಣವನ್ನು ಪ್ರಸಿದ್ಧಿಸಬಾರದೆಂದು ನಿರ್ಬಂಧಿಸಿದ್ದರಿಂದ ಸ್ಥಳೀಯ ಪತ್ರಿಕೆಗಳಲ್ಲಿ ಅದು ಪ್ರಸಿದ್ಧವಾಗಲಿಲ್ಲ. ಸ್ಥಳೀಯ ಪತ್ರಿಕೆಗಳಲ್ಲಿ ಪ್ರಸಿದ್ಧವಾಗಲಿಲ್ಲೆಂದು ಕೂಚೇ ನಡೆಯಲಿಲ್ಲ ಭಾಷಣವೆ ಆಗಲಿಲ್ಲೆಂದು ಹೇಳಿ ಎಲ್ಲವನ್ನೂ ಹಾರಿಸಿಕೊಳ್ಳುವದು ಆಡಳಿತವನ್ನು ಸಾಗಿಸುವ ಸರಕಾರಕ್ಕೆ ಎಂದೂ ಶೋಭಿಸದು. ಈ ಬಗೆಯಾಗಿ ಹಿಂಸಾ ಪ್ರಚೋದಕರನ್ನು ಬೆಂಬಲಿಸುತ್ತ ನಡೆಯುವದರಿಂದ ಪರಿಸ್ಥಿತಿ ಮತ್ತಷ್ಟು ಹದಗೆಡುವದಲ್ಲದೆ ಅದೆಂದಿಗೂ ಸುಧಾರಿಸದು. ಇದರ ಮರ್ಮವನ್ನು ನಿಜಾಮ ಸರಕಾರವು ಇನ್ನೂ ತಿಳಿಯದಿದ್ದುದು ದೇಶದ ದುರ್ದೈವವು.

## ಹಿಂದೀ ಮುಸಲ್ಮಾನರಿಂದ ಖಂಡನೆ

ಇತ್ತೆಹಾದುಲ್‌ರ ಈ ಹೊಣೆಗೇಡಿತನವನ್ನು ಹಿಂದೀ ಮುಸಲ್ಮಾನರು ತೀವ್ರವಾಗಿ ಖಂಡಿಸಿದ್ದಾರೆ. ಬಂಗಾಲದ ರಾಷ್ಟ್ರೀಯ ಮುಸಲ್ಮಾನ ಮುಖಂಡರಾದ ಡಾ. ಅಹಮ್ಮದರವರು ರಜವಿಯವರ ಭಾಷಣದ ಬಗ್ಗೆ ಹೇಳಿಕೆಯೊಂದನ್ನು ಕೊಟ್ಟಿರುವರು. ಹಿಂದುಸ್ತಾನ ಸರಕಾರದವರು ಹೈದರಾಬಾದದ ಮೇಲೆ ಕೈ ಎತ್ತಿದರೆ ಹಿಂದುಸ್ತಾನದಲ್ಲಿದ್ದ ೪॥ ಕೋಟಿ ಮುಸಲ್ಮಾನರು ಹಿಂದುಸ್ತಾನ ಸರಕಾರದ ವಿರುದ್ಧ ಬಂಡು ಹೂಡುವರು. ಹಿಂದುಸ್ತಾನದಲ್ಲಿರುವ ಮುಸಲ್ಮಾನರು ಪಂಚಮಾಂಗದವರಿರುವರು ಎಂದು ಮುಂತಾಗಿ ರಜವಿಯವರು ಹೇಳಿದ್ದನ್ನು ತೀವ್ರವಾಗಿ ಖಂಡಿಸಿ ಹಿಂದೀ ಮುಸಲ್ಮಾನರು ಅಷ್ಟೇನು ಮೂರ್ಖರಿಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಸಂಯುಕ್ತ ಪ್ರಾಂತದ ಮಂತ್ರಿಗಳಲ್ಲೊಬ್ಬರಾದ ರಫೀಜ ಮಹಮ್ಮದ ಇಬ್ರಾಹಿಮರೂ ಪ್ರಕಟನೆಯೊಂದನ್ನು ಹೊರಡಿಸಿ ಹೈದರಾಬಾದದ ಮುಸಲ್ಮಾನ ಮುಖಂಡರು ಇನ್ನೊಂದು ಪಾಕಿಸ್ತಾನವನ್ನು ಸ್ಥಾಪಿಸುವ ವಿಚಾರವನ್ನು ಬಿಟ್ಟುಕೊಡಬೇಕೆಂದು ಎಚ್ಚರಿಸಿರುವರಲ್ಲದೆ ರಜವಿಯಂಥವರ ಅಪಪ್ರಚಾರಕ್ಕೆ ಹಿಂದೀ ಮುಸಲ್ಮಾನರು ಎಂದೂ ಮೋಸ ಹೋಗಲಾರರೆಂದು ಅಭಿಪ್ರಾಯಪಟ್ಟಿರುವರು. ಮೌಲಾನಾ ಅಬುಲ್‌ಕಲಂ ಆಜಾದರು ಅ. ಪ್ರೆ. ಕ್ಕೆ ಇತ್ತ ಒಂದು ಸಂದರ್ಶನದಲ್ಲಿ ನಿಜಾಮರು ಕಾಲಮಾನ ಪರಿಸ್ಥಿತಿಗೆ ಅನುಗುಣವಾಗುವಂಥ ರಾಜಕೀಯ ಸುಧಾರಣೆಗಳನ್ನು ತಮ್ಮ ರಾಜ್ಯದಲ್ಲಿ ಸಾರಬೇಕು. ಹಿಂದುಸ್ತಾನದ ಗೂಢ ಸ್ನೇಹ ಸಂಬಂಧವನ್ನು ಬೆಳಿಸಬೇಕು. ಅಲ್ಲಿ ಶಾಂತಿ ಸ್ಥಾಪಿತವಾಗದಿದ್ದರೆ ಭಾರತವು ಉಗ್ರ ಕ್ರಮ ಕೈಕೊಳ್ಳಬೇಕಾಗುವದೆಂದು ಮುಂತಾಗಿ ಎಚ್ಚರಿಸಿದ್ದಾರೆ.

## ಹಿಂದೂ ಕಾಯದೆ ತಿದ್ದುಪಡಿ

ಹಿಂದುಸ್ತಾನ ಸರಕಾರದ ಕಾಯದೇ ಮಂತ್ರಿಗಳಾದ ಡಾ. ಅಂಬೇಡಕರರು ಹಿಂದೂ ಕಾಯದೆಯಲ್ಲಿ ಕ್ರಾಂತಿಕಾರಕ ತಿದ್ದುಪಡಿಗಳನ್ನು ಸೂಚಿಸುವ ಮಸೂದೆಯೊಂದನ್ನು ಹಿರಿಯೋಲಗದಲ್ಲಿ ಮಂಡಿಸಿರುವರು. ಅದರ ಪ್ರಾಸ್ತಾವಿಕ ಚರ್ಚೆಯಾಗಿ ಪರಿಶೀಲಕ ಸಮಿತಿಗೆ ಅದನ್ನು ಕಳಿಸಲಾಗಿದೆ. ಯಾವುದೊಂದು ಗಂಡು ಕೂಸು ಹುಟ್ಟಿದ ಕೂಡಲೆ ಹಿಂದೂ ಕಾಯದೆಯನ್ವಯ ಅದಕ್ಕೆ ಆಸ್ತಿಯಲ್ಲಿ ಪಾಲುಸಿಕ್ಕುವುದುಂಟು. ಈ ಹಕ್ಕನ್ನು ರದ್ದುಗೊಳಿಸುವ ತಿದ್ದುಪಡಿ ಇದರಲ್ಲಿ ಮಹತ್ವದ್ದಾಗಿದೆ. ಏಕತ್ರ ಕುಟುಂಬದಲ್ಲಿ ಮೃತನ ಆಸ್ತಿಯು ದಾಯಾದತನವು ಉಳಿದು ಇತರ ಅಣ್ಣತಮ್ಮಂದಿರಿಗೆ ಹೋಗುವ ಹಕ್ಕನ್ನು ತೆಗೆದು ಹಾಕುವದು ಮತ್ತೊಂದು ತಿದ್ದುಪಡಿ. ಮೂರನೆಯ ತಿದ್ದುಪಡಿಯೆಂದರೆ ತಂದೆಯ ಆಸ್ತಿಯಲ್ಲಿ ಮಗಳಿಗೆ ಮಗನ ಅರ್ಧದಷ್ಟು ಪಾಲು ಸಿಕ್ಕುವದು. ಜಾತಿ ಗೋತ್ರಗಳ ನಿರ್ಬಂಧವನ್ನು ತೆಗೆದು ಹಾಕಿ ಬೇರೆ ಜಾತಿಯ ಹುಡುಗನನ್ನು ದತ್ತಕ ತೆಗೆದುಕೊಳ್ಳಬಹುದು. ಬೇರೆ ಜಾತಿಯ ಹೆಣ್ಣನ್ನು ಮದುವೆಯಾಗಬಹುದು ಎಂದೂ ಸೂಚಿಸಲಾಗಿದೆ. ಅದೇ ರೀತಿ ಏಕಪತ್ನಿತ್ವ ಹಾಗೂ ದಾಂಪತ್ಯ ವಿಚ್ಛೇದಕ್ಕೂ ಈ ತಿದ್ದುಪಡಿಗಳಿಂದ ಅವಕಾಶ ಕೊಡಲಾಗಿದೆ. ತಿದ್ದುಪಡಿಯ ಮುಖ್ಯಾಂಶಗಳಿವು. ಇವನ್ನು ನೋಡಿದರೆ ಹಿಂದೂ ಕಾಯದೆಯಲ್ಲಿ ಮಹತ್ವದ ಬದಲಾವಣೆಗಳನ್ನು ಸೂಚಿಸಲಾಗಿದೆಯೆಂಬುದು ಕಂಡುಬರದಿರಲಾರದು. ಹಿಂದೂ ಕಾಯದೆಯು ಹಿಂದೂ ಧರ್ಮವನ್ನನುಸರಿಸಿದೆಯೆಂದು ಹೇಳಲಾಗುತ್ತದೆ. ಆದರೆ ಹಿಂದೂ ಧರ್ಮಶಾಸ್ತ್ರಕಾರರು ಹೇಳಿದ ನೀತಿ ಆಚಾರ ವಿಚಾರಗಳತ್ತ ಗಮನಿಸದೆ ಮನಬಂದಂತೆ ಕಾಯದೆ ಮಾಡುವದನ್ನು ನೋಡಿದರೆ ಇದಕ್ಕೆ ಹಿಂದೂ ಕಾಯದೆಯೆಂದು ಕರೆಯುವದೆ ನ್ಯಾಯ್ಯವಾಗಲಾರದೆಂದು ಹೇಳಬಹುದು. ಹಿಂದುಸ್ತಾನ ವಿದೀಗ ಸ್ವತಂತ್ರವಾಗಿದ್ದು ಸ್ವತಂತ್ರ ಹಿಂದುಸ್ತಾನ ಸರಕಾರವು ಹಿಂದುಸ್ತಾನ ಜಾತ್ಯತೀತ ರಾಷ್ಟ್ರವೆಂದು ಸಾರಿದೆ. ಈ ಪರಿಸ್ಥಿತಿಯಲ್ಲಿ ಹಿಂದೂ ಕಾಯದೆ, ಮುಸಲ್ಮಾನ ಕಾಯದೆ, ಪಾರಶೀ ಕಾಯದೆ ಮೊದಲಾದ ಬೇರೆ ಬೇರೆ ಕಾಯದೆಗಳ ಹೆಸರಿಟ್ಟು ಆಯಾ ಧರ್ಮಶಾಸ್ತ್ರಕಾರರು ಹೇಳಿದುದನ್ನೆಲ್ಲ ಕಸದ ಬುಟ್ಟಿಯನ್ನು ಕಾಣಿಸಿ ಮನಬಂದಂತೆ ತಿದ್ದುಪಡಿಗಳನ್ನು ಮಾಡುವದರಲ್ಲಿ ಅರ್ಥವೇನು? ಜಾತಿ ಧರ್ಮಗಳನ್ನೆಣಿಸದೆ ಇಡೀ ಹಿಂದವಾಸಿಗಳಿಗೆ ಅನ್ವಯಿಸುವಂಥ ಕಾಯದೆ ಮಾಡುವದು ಸರಕಾರದ ಕರ್ತವ್ಯವಾಗಿದೆ. ಏಕಪತ್ನಿತ್ವ ಕಾಯದೆ ಹಿಂದುಗಳಿಗೆ ಮಾತ್ರ ಅನ್ವಯಿಸುವದು. ಬೇರೆ ಯಾವ ಧರ್ಮದವರಿಗೂ ಅನ್ವಯಿಸುವುದಿಲ್ಲ. ಹೀಗೇಕೆ? ಸರಕಾರದ ಜಾತ್ಯತೀತ ಧೋರಣಕ್ಕೆ ಇದು ಒಗ್ಗುವದೋ? ಹೆಣ್ಣುಮಕ್ಕಳಿಗೆ ಕೊಡಮಾಡಿದ ಹೆಚ್ಚಿನ ಹಕ್ಕುಬಾಧ್ಯತೆಗಳು ಅವಶ್ಯವೆನಿಸಿದರೂ ಹಿಂದೂ ಧರ್ಮಶಾಸ್ತ್ರದ ಮೂಲಕ್ಕೇ ಹಾಕಿದ ಈ ಕೊಡಲಿ ಪೆಟ್ಟು ನ್ಯಾಯ್ಯವೆನಿಸುವದೊ?

## ಮಂದಿರಗಳ ಪಾವಿತ್ರ್ಯ

ದೇವಾಲಯಗಳಲ್ಲಿನ ದೇವರಲ್ಲಿ ಸಾನ್ನಿಧ್ಯವುಳ್ಳದು ಆದರಿಂದ ಮಾನವನ ಆತ್ಮೋದ್ಧಾರಕ್ಕೆ ಸಹಾಯವಾಗಬೇಕಾದರೆ ಅಲ್ಲಿನ ಪಾವಿತ್ರ್ಯವನ್ನು ಕಾಯ್ದುಕೊಳ್ಳುವದು ಅತ್ಯಂತ ಅವಶ್ಯವಾಗಿದೆ. ಆ ಪರಿಶುದ್ಧತೆ, ಪಾವಿತ್ರ್ಯ ಮಂದಿರಗಳಲ್ಲಿ ಇಲ್ಲವೆ ಮಂದಿರಗಳಲ್ಲಿದ್ದ ದೇವರ ಮೂರ್ತಿಗಳಲ್ಲಿ ಉಳಿಯದಿದ್ದರೆ ಬೇರೆಡೆ ಸಿಕ್ಕುವ ಕಲ್ಲಿನ ಮೂರ್ತಿಗಳೆ ಅವಾಗಿ ಪರಿಣಮಿಸುವವು. ಅಂಥ ಕಲ್ಲಿನ ಮೂರ್ತಿಗಳಿಗಾಗಿ ಭವ್ಯವಾದ ಕಟ್ಟಡದ ಅವಶ್ಯಕತೆ ಇಲ್ಲ, ತಿಂಗಳ ಸಾವಿರಾರು ರೂಪಾಯಿಗಳನ್ನು ವೆಚ್ಚಮಾಡುವ ಅವಶ್ಯಕತೆಯಿಲ್ಲ. ಇದನ್ನೆಲ್ಲ ನೆನೆದು ಧರ್ಮಶಾಸ್ತ್ರಕಾರರು ಮಂದಿರಗಳ ಬಗ್ಗೆ ಕೆಲವೊಂದು ನಿಯಮ ನಿಬಂಧನೆಗಳನ್ನು ಹಾಕಿದ್ದುಂಟು. ದೇವರ ಪೂಜೆಯನ್ನು ಮಾಡುವವರು ಅದಕ್ಕಾಗಿಯೆ ನೇಮಕಹೊಂದಿದ ಅರ್ಚಕರು; ವಿಶಿಷ್ಟ ಹಕ್ಕುಬಾಧ್ಯತೆಗಳುಳ್ಳವರು ಅವರಾದರೂ ಸಿಕ್ಕಾಬಟ್ಟೆಯಾಗಿ ದೇವರನ್ನು ಮುಟ್ಟಲಾರರು. ಶುಚಿರ್ಭೂತರಾಗಿ ದೇವರನ್ನು ಪೂಜಿಸಬಲ್ಲರು. ಶುಚಿತ್ವವಿಲ್ಲದೆ ದೇವರನ್ನು ಪೂಜಿಸಿದರೆ ಆ ದೇವನಲ್ಲಿ ಸಾನಿಧ್ಯವೇ ಉಳಿಯದು. ಇದರ ಮರ್ಮವನ್ನು ತಿಳಿದುಕೊಂಡೇ ಮದ್ರಾಸ ಸರಕಾರದವರು ಮಂದಿರ ಪ್ರವೇಶ ಕಾನೂನಿನ ಸಂಬಂಧದಲ್ಲಿ ಕೆಲವು ನಿಯಮಾವಲಿಗಳನ್ನು ಮಾಡಿರುವರು. ಮಂದಿರದ ಮತ್ತು ದೇವರ ಪಾವಿತ್ರ್ಯರಕ್ಷಣೆಗಾಗಿ ಅವು ಅವಶ್ಯವೆಂದು ಹೇಳದಿರಲಾರೆವು. ಹಿಂದೂ ಧರ್ಮದಲ್ಲಿಲ್ಲದವರು ವೃದ್ಧಿ, ಸೂತಕ ಬಂದವರು, ಮುಟ್ಟಾದ ಸ್ತ್ರೀಯರು ಕುಡುಕರು, ಸಾಂಸರ್ಗಿಕ ರೋಗವಿದ್ದವರು ಮೊದಲಾದವರು ದೇವಾಲಯವನ್ನು ಪ್ರವೇಶಿಸಬಾರದು. ದೇವಾಲಯಕ್ಕೆ ಸಂಬಂಧಿಸಿದ ಬಾವಿ ಹೊಂಡದಲ್ಲಿ ಸ್ನಾನ ಮಾಡಬಾರದು ಎಂದು ವಿಧಿಸಲಾಗಿದೆ. ಸ್ನಾನ ಮಾಡಿ ರೂಢಿಯಂತೆ ವಸ್ತ್ರ ಧರಿಸಿ ದೇವಾಲಯವನ್ನು ಪ್ರವೇಶಿಸಬೇಕು. ದೇವಾಲಯದ ಕಟ್ಟಡಗಳನ್ನು, ದೇವಾಲಯದ ಆವಾರವನ್ನು ದೇವಾಲಯದ ಪೂಜಾದಿ ಕಾರ್ಯಗಳಿಗೆ ರೂಢಿಯಂತೆ ಉಪಯೋಗಿಸುವದನ್ನು ಬಿಟ್ಟುಕೊಟ್ಟು ಬೇರಾವ ರೀತಿಯಲ್ಲಿಯೂ ಉಪಯೋಗಿಸಲಿಕ್ಕೆ ಬರಲಾರದು ಮೊದಲಾದ ನಿಯಮಗಳನ್ನು ಮಾಡಿರುವರಲ್ಲದೆ ಈ ನಿಯಮಗಳಂತೆ ಎಲ್ಲರೂ ನಡೆದುಕೊಂಡು ಮಂದಿರಗಳ ಪಾವಿತ್ರ್ಯವನ್ನು ಕಾಯ್ದುಕೊಳ್ಳಬೇಕೆಂದೂ ಕೇಳಿಕೊಂಡಿದ್ದಾರೆ. ನಾವು ಮೇಲೆ ಹೇಳಿದಂತೆ ಮಂದಿರಗಳ ಪಾವಿತ್ರ್ಯವನ್ನು ರಕ್ಷಿಸಬೇಕಾದರೆ ನಿಯಮ ನಿಬಂಧನೆಗಳನ್ನು ಪಾಲಿಸುವದು ಅತ್ಯಂತ ಅವಶ್ಯವಾಗಿದೆ. ಮದ್ರಾಸ ಸರಕಾರದವರು ಮಾಡಿದ ಈ ನಿಯಮಾವಲಿಗಳು ಬೇರೆ ಸರಕಾರಗಳು ಅನುಕರಿಸುವಂಥವಿರುವವೆಂದು ಬೇರೆ ಹೇಳಬೇಕಿಲ್ಲ.

## ಹಿರಾಕುಡ ಅಣೆಕಟ್ಟು

ಉತ್ಕಲ ಪ್ರಾಂತ ಹೊಸದಾಗಿ ಸ್ಥಾಪಿತವಾದ ಪ್ರಾಂತವು. ಈ ಪ್ರಾಂತವು ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳುವದಕ್ಕಾಗಿ ಮಾಡಿದ ಪ್ರಯತ್ನಗಳಲ್ಲಿ ಹಿರಾಕುಡ ಅಣೆಕಟ್ಟಿನ ಯೋಜನೆಯು ಅತ್ಯಂತ ಮಹತ್ವದ್ದು. ಈ ಯೋಜನೆಯ ಶಂಕುಸ್ಥಾಪನೆಯ ಮಹೋತ್ಸವವು ಹಿಂದುಸ್ತಾನದ ಮುಖ್ಯ ಮಂತ್ರಿಗಳಾದ ಪಂಡಿತ ಜವಾಹರಲಾಲರ ನೇತೃತ್ವದಲ್ಲಿ ಮೊನ್ನೆ ೧೨ ನೇ ತಾರೀಕಿಗೆ ನೆರವೇರಿತು. ಈ ಯೋಜನೆಯು ೪೮ ಕೋಟಿಯದಿದ್ದು ೧೪ ಲಕ್ಷ ಎಕರೆ ಭೂಮಿಗೆ ಇದರಿಂದ ನೀರು ಸಿಕ್ಕುವದಲ್ಲದೆ ಮಹಾನದಿಯ ನೆರೆಯಿಂದ ಆಗುತ್ತಿದ್ದ ಅನರ್ಥಗಳು ತಪ್ಪುವವು. ಈ ಯೋಜನೆಯಿಂದ ೧೩೫ ಸಾವಿರ ಎಕರೆ ಭೂಮಿಯೊಂದೂ ನೀರಲ್ಲಿ ಮುಳುಗುವದು. ಆದರೆ ಇಷ್ಟರಿಂದ ಹತಾಶರಾಗಿ ಯೋಜನೆಯನ್ನು ಸಾಕಂತ ದೃಷ್ಟಿಯಿಂದ ನೋಡುವದು ನ್ಯಾಯ್ಯವಾಗಲಾರದು. ಈ ಅಣೆಕಟ್ಟಿನಿಂದ ನೀರಾವರಿಗೆ ಉಪಯೋಗವಾಗುವದಲ್ಲದೆ ೩೫೦ ಸಾವಿರ ಕಿಲೊವ್ಯಾಟಿನಷ್ಟು ಜಲವಿದ್ಯುಚ್ಛಕ್ತಿಯು ಉತ್ಪತ್ತಿಯಾಗುವದೆಂದು ಅಂದಾಜು ಮಾಡಲಾಗಿದೆ. ಇದರಿಂದ ಔದ್ಯೋಗಿಕ ಅಭಿವೃದ್ಧಿಗೆ ಬಹಳ ಸಹಾಯ ಸಿಕ್ಕುವದು. ಹಡಗಗಳ ಓಡಾಟಕ್ಕೆ ಈ ಯೋಜನೆಯಿಂದ ಅವಕಾಶವುಂಟಾಗುವದು. ಸಾರಿಗೆಗಳ ಸಾಗಾಟ ನಡೆಯುವದಕ್ಕೂ ಅನುಕೂಲವಾಗುವದು. ಸ್ವತಂತ್ರ ಹಿಂದುಸ್ತಾನ ಸರಕಾರದ ಮುಖ್ಯ ಮಂತ್ರಿಗಳು ಈ ಯೋಜನೆಗೆ ಪ್ರಥಮ ಪ್ರಾಶಸ್ತ್ಯ ಕೊಟ್ಟದ್ದು ಅತ್ಯಂತ ಮಹತ್ವದ್ದಾಗಿದೆ. ಪರಕೀಯ ಸರಕಾರವು ಇಂಥ ವಿಧಾಯಕ ಯೋಜನೆಗಳಿಗೆ ಮಹತ್ವ ಕೊಡದ್ದರಿಂದಲೆ ಇಂದು ಹಿಂದುಸ್ತಾನ ಆಹಾರ ಪದಾರ್ಥಗಳಲ್ಲಿಯಾಗಲಿ ಉಳಿದ ಅವಶ್ಯಕ ವಸ್ತುಗಳಲ್ಲಿಯಾಗಲಿ ಸ್ವಾವಲಂಬಿಯಾಗಿಲ್ಲ. ಒಕ್ಕಲತನಕ್ಕೆ ಮತ್ತು ಉದ್ಯೋಗಾಭಿವೃದ್ಧಿಗೆ ಅನುಕೂಲವಾಗುವಂಥ ಈ ಬಗೆಯ ಯೋಜನೆಗಳನ್ನು ಹಿಂದಿನ ಸರಕಾರ ಆಗಲೆ ಕೈಕೊಂಡಿದ್ದರೆ ಹಿಂದುಸ್ತಾನದ ಸ್ಥಿತಿಯೆ ಬೇರೆಯಾಗಿರುತ್ತಿತ್ತು. ಇನ್ನು ಮೇಲಾದರೂ ಸ್ವತಂತ್ರ ಹಿಂದುಸ್ತಾನ ಸರಕಾರದವರು ಮತ್ತು ಪ್ರಾಂತೀಯ ಸರಕಾರಗಳು ಇಂಥ ಯೋಜನೆಗಳನ್ನು ಬೇಗನೆ ಕಾರ್ಯರೂಪದಲ್ಲಿ ತಂದು ಹಿಂದುಸ್ತಾನದ ಭಾಗ್ಯಲಕ್ಷ್ಮಿಯನ್ನು ಅಭಿವೃದ್ಧಿಪಡಿಸಬೇಕೆಂದು ಬಿನ್ನವಿಸುತ್ತೇವೆ.

## ಆರ್ಥಿಕ ಸ್ವಾತಂತ್ರ್ಯ

ಹಿಂದುಸ್ತಾನ ಸರಕಾರದ ಕೂಲಿಕಾರ ಮಂತ್ರಿಗಳಾದ ಶ್ರೀ ಜಗಜೀವನರಾಮರು ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಬೇಕೆಂದು ಬದ್ಧಪ್ರತಿಜ್ಞರಾಗಿರುವಂತೆ ತೋರುತ್ತದೆ. ಬಂಡವಲುದಾರರು ಕೂಲಿಕಾರರು ಮತ್ತು ಸರಕಾರದವರು ಈ ಮೂವರ ಸಹಕಾರವಿಲ್ಲದೆ ಆರ್ಥಿಕ ಪರಿಸ್ಥಿತಿ ಸುಧಾರಿಸದೆಂಬ ಬೀಜಮಂತ್ರವನ್ನು ಅವರು ಕಂಡು ಹಿಡಿದಿರುವರು. ಅಂತೆಯೆ ಅವರು ಆ ದಿಶೆಯಲ್ಲಿ ಪ್ರಯತ್ನ ನಡೆಸಿರುವರು. ಬಂಡವಲುದಾರರು ತಮ್ಮ ಲಾಭವನ್ನು ಯಾವ ರೀತಿಯಿಂದ ಕೂಲಿಕಾರರಲ್ಲಿ ಹಂಚಬೇಕೆಂಬುದನ್ನು ನಿರ್ಣಯಿಸಲು ಇಂಥದೊಂದು ಸಮಿತಿಯನ್ನು ಸರಕಾರದವರು ನೇಮಿಸಲಿರುವರೆಂದು ಅವರು ಸಾರಿದ್ದಾರೆ. ಕೂಲಿಕಾರರನ್ನು ಉದ್ದಿಮೆದಾರರು ಸರಿಯಾದ ರೀತಿಯಿಂದ ನಡೆಸಿಕೊಂಡಿದ್ದರೆ ಅವರು ರಾಜಕಾರಣಿಗಳ ಪಕ್ಷದ ಬಲೆಯಲ್ಲಿ ಸಿಕ್ಕುತ್ತಿರಲಿಲ್ಲ ಎಂದು ಜಗಜೀವನರಾಮರು ಅಭಿಪ್ರಾಯಪಟ್ಟಿದ್ದಾರೆ. ಲಾಭದಲ್ಲಿ ಕೂಲಿಕಾರರಿಗೆ ಯಾವ ಪ್ರಮಾಣದಲ್ಲಿ ಪಾಲು ಸಿಕ್ಕಬೇಕೆಂಬುವನ್ನು ನಿರ್ಣಯಿಸಲು ಸಮಿತಿಯ ಅವಶ್ಯಕತೆಯಿದೆ. ಕೂಲಿಕಾರರು ಈ ರೀತಿ ರಾಜಕಾರಣಿಗಳ ಹಸ್ತಕರಾಗಿ ಆಗಾಗ ಸಂಪು ಮೊದಲಾದವುಗಳಲ್ಲಿ ತೊಡಗುವದರಿಂದ ಉತ್ಪಾದನೆ ಕುಗ್ಗುತ್ತ ನಡೆದಿದೆ. ಕೂಲಿಕಾರರಿಗೆ ಲಾಭದಲ್ಲಿ ಪಾಲು ಸಿಕ್ಕುವದು ಅವಶ್ಯವಾಗಿದ್ದರೂ ಉತ್ಪಾದನೆಯನ್ನು ಹೆಚ್ಚಿಸುವದಲ್ಲಿ ಈಗ ಅವರು ತೋರುತ್ತಿರುವ ಅನಾಸ್ಥೆ ಅಲಕ್ಷ್ಯ ಖಂಡನೀಯವೆಂದು ಯಾರಾದರೂ ಹೇಳಬಹುದಾಗಿದೆ. ಹಕ್ಕಿನ ಜೊತೆಗೆ ಹೊಣೆಯ ಅರಿವೂ ಪ್ರತಿಯೊಬ್ಬನಿಗೆ ಇರುವದು ಅವಶ್ಯ. ಮಹಾತ್ಮಾ ಗಾಂಧಿಯವರು ಈ ಮಾತನ್ನು ಮೊದಲಿನಿಂದಲೂ ಹೇಳುತ್ತಿದ್ದರು. ಕೂಲಿಕಾರರು ತಮ್ಮ ಹಕ್ಕು ಬಾಧ್ಯತೆಗಾಗಿ ಹೋರಾಡುತ್ತಿರುವಾಗಲೆ ಹೊಣೆಯನ್ನರಿತುಕೊಂಡು ಕಾರ್ಯ ಮಾಡುತ್ತ ಹೋದರೆ ಇಂದಿನ ಪರಿಸ್ಥಿತಿ ಬಹಳ ಮಟ್ಟಿಗೆ ಸುಧಾರಿಸಿ ಉದ್ದಿಮೆದಾರರು ಮತ್ತು ಕೂಲಿಕಾರರಲ್ಲಿ ಮೊದಲಿನ ಸ್ನೇಹ ಸೌಹಾರ್ದ ಉಳಿದು ದೇಶದ ಆರ್ಥಿಕ ಅಭಿವೃದ್ಧಿಗೂ ಅವಕಾಶವುಂಟಾಗುವದು. ಸಂಬಂಧಿಸಿದವರು ಇತ್ತ ಗಮನಿಸುವರೋ?

# ಅಂತರ್ದೇಶೀಯ

## ಕೊಲಂಬಿಯಾದಲ್ಲಿ ಕ್ರಾಂತಿ

ಅಮೇರಿಕೆಯ ೨೧ ರಾಷ್ಟ್ರಗಳ ಪ್ರತಿನಿಧಿಗಳು ಕಳೆದ ವಾರ ಕೊಲಂಬಿಯಾದ ರಾಜಧಾನಿ ಬಗೋಟಾದಲ್ಲಿ ಸಭೆ ಸೇರುವವರಿದ್ದರು. ಅದೇ ಸಂಧಿಯಲ್ಲಿ ಕೊಲಂಬಿಯಾದಲ್ಲಿ ಸಶಸ್ತ್ರ ಕ್ರಾಂತಿಯು ಪ್ರಯುಕ್ತವಾಯಿತು. ಎಡ ಲಿಬರಲ್ ಪಕ್ಷಗಳೂ ಕಾಮಗಾರ ಸಂಘಗಳೂ ಸೇರಿ ಕಾನ್ಸರ್ವೇಟಿವ ರಾಷ್ಟ್ರಾಧ್ಯಕ್ಷ ಪೆರೆಜ (೧೯೪೬ ರಲ್ಲಿ ಆರಿಸಲ್ಪಟ್ಟವನು) ರಿಂದ ಅಧಿಕಾರವನ್ನು ಕಸಿದುಕೊಳ್ಳಲು ದಂಗೆಯೆದ್ದಿಸಿದವು. ಇದಿ ರಕ್ತಸ್ನಾನಕ್ಕೆ ನೆಪವಾದುದೆಂದರೆ ಎಡ ಲಿಬರಲ್ ವಾದಿ ಮುಂದಾಳಾದ ಎಲೀಸರ ಗೈಟನನನ್ನು ಯಾರೋ ಕೊಂದು ಹಾಕಿದ್ದು. ಸಾವಿರಾರು ಜನ ಸೇರಿ ಕೊಲೆಗಡುಕನನ್ನು ಹಿಡಿದು ಅಲ್ಲಿಂದಲ್ಲೇ ಬಡಿದು ಕೊಂದರು. ಹೆಣವನ್ನು ಬೀದಿ ಮಾರ್ಗವಾಗಿ ಎಳೆದುಕೊಂಡು ಅಧ್ಯಕ್ಷ ಪೆರೆಜನ ಅರಮನೆಗೆ ಹೋಗಿ ಗೊಂದಲ ಹಾಕಿದರು. ಕ್ಷಣದಲ್ಲಿ ೮೦೦೦ ಅಡಿ ಎತ್ತರದ ಪರ್ವತನಗರ ಬಗೋಟಾದಲ್ಲಿ ಬಡಿದಾಟ ಪ್ರಾರಂಭವಾಯಿತು. ಸರಕಾರಿ ಕಟ್ಟಡಗಳು ಉರಿಯಹತ್ತಿದವು. ಹಲವು ಪೋಲೀಸ್ ಮತ್ತು ಸೈನ್ಯ ಪಥಕಗಳು ದಂಗೆಗಾರರೊಡನೆ ಸೇರಿದವು. ಬೇರೆ ಬೇರೆ ನಗರಗಳಿಗೂ ಹಬ್ಬಿತು. ಕ್ರಾಂತಿ ಜಯಶೀಲವಾಯಿತೆಂದೇ ಅನಿಸಿತು. ೧೩ ತಾಸುಗಳ ವರೆಗೆ ಅರಾಜಕತೆಯು ಮೆರೆಯಿತು. ಕೊನೆಗೆ ಮಾತ್ರ ಸರಕಾರಿ ಸೈನ್ಯಗಳ ಕೈ ಮೇಲಾಯಿತು. ಅಷ್ಟರಲ್ಲಿ ೩೩ ಜನ ಸತ್ತು ೩೦೦ ಜನರಿಗೆ ಗಾಯವಾಗಿತ್ತು. ಅಂತರ್ ಅಮೇರಿಕಾ ಪರಿಷತ್ತು ಅಲ್ಲೇ ನಿಂತುಹೋಯಿತು.

ಈ ಕ್ರಾಂತಿಯನ್ನು ಎಬ್ಬಿಸಿದವರು ಕಮ್ಯುನಿಸ್ಟರಲ್ಲವಾದರೂ ಅದು ಪ್ರಾರಂಭವಾದೊಡನೆ ಅದರ ಲಾಭ ಪಡೆದು ಅವರು ಹೋರಾಟದಲ್ಲಿ ಧುಮುಕಿದರು. ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಡಾಲರ್ ಮುಷ್ಟಿಯಲ್ಲಿ ಸಿಲುಕಿರುವ ದಕ್ಷಿಣ ಅಮೇರಿಕೆಯಲ್ಲಿ ಕಮ್ಯುನಿಸ್ಟರಿಗೆ ಗಟ್ಟಿಯಾಗಿ ಕಾಲೂರಲೆಡೆಯಿದ್ದಿಲ್ಲ. ಇದೊಂದು ಸಂಧಿ ಸಿಕ್ಕಿತು. ಅವರೇಕೆ ಬಿಟ್ಟಾರು?

ಕ್ರಾಂತಿಯಿಂದ ಎರಡು ಸಂಗತಿಗಳು ಘಟಿಸಿದವು. ಒಂದು- ಇದರಲ್ಲಿ ಇಬ್ಬರು ರಶಿಯನ್ ಗೂಢಚಾರರ ಅಂಗವಿತ್ತೆಂದು ಹೇಳಿ ಕೊಲಂಬಿಯಾ ಸರಕಾರ ರಶಿಯಾದೊಡನೆ ರಾಯಭಾರಿ ಸಂಬಂಧ ಕಡಿದುಕೊಂಡಿದೆ. ಇನ್ನೊಂದು- ದಂಗೆಯೆದ್ದವರಲ್ಲಿ ಕೆಲ ಲಿಬರಲ್ಲರನ್ನು ಸೇರಿಸಿಕೊಂಡು ಅಧ್ಯಕ್ಷ ಪೆರೆಜನು ಹೊಸ ಸರಕಾರ ಸ್ಥಾಪಿಸಿದ್ದಾನೆ. ಇನ್ನು ಕೋಟ್ಯಂತರ ರೂಪಾಯಿ ಹಾನಿಯಾಗಿರುವದದನ್ನು ಅವನು ತಿದ್ದಬೇಕು.

ಈ ಕೊಲಂಬಿಯಾದಲ್ಲಿ ಗುಂಡಿನ ಸಪ್ಪಳ ಇನ್ನೂ ಅಡಗಿಲ್ಲ, ಅಷ್ಟರಲ್ಲಿ ದ. ಅಮೇರಿಕೆಯ ಇನ್ನೊಂದು ರಾಷ್ಟ್ರವಾದ ಕೋಸ್ಟಾರೀಕಾದಲ್ಲಿ ಕಮ್ಯುನಿಸ್ಟರ ಬಂಡು ಆರಂಭವಾಗಿದೆ. ಹಿಂದಿನ ವಾರ ಅಲ್ಲಿ ನಡೆದ ಚುನಾವಣೆಗಳಲ್ಲಿ ನ್ಯಾಶನಲ್ ಪಕ್ಷ ವಿಜಯವನ್ನು ದೊರಕಿಸಿದ್ದರೂ ಅದು ಮೋಸದಿಂದ ವಿಜಯಿಯಾಯಿತೆಂದು ಹೇಳಿ ಅಧ್ಯಕ್ಷ ಪಿಕಾಡೋ ಅವರು ಅಧಿಕಾರ ಬಿಟ್ಟುಕೊಡಲು ನಿರಾಕರಿಸಿದ್ದೇ ಬಂಡಿಗೆ ಮುಖವಾಯಿತು. ಬಂಡುಗಾರರು ಅನೇಕ ಆಯಕಟ್ಟಿನ ಸ್ಥಳಗಳನ್ನು ಹಿಡಿದುಕೊಂಡಿದ್ದು ನೆರೆರಾಷ್ಟ್ರಗಳಾದ ಪನಾಮಾ, ಗ್ವಾಟೆಮಾಲಾಗಳ ಸಹಾಯ ಅವರಿಗೆ ದೊರಕಿದೆಯಂತೆ.

## ಪವಿತ್ರ ನಗರದ ಮೇಲೆ ಗುಂಡಿನ ಮಳೆ

ಇತಿಹಾಸದಲ್ಲಿ ಮೊದಲ ಬಾರಿ ಪವಿತ್ರ ನಗರಿ ಜೆರುಸಲೇಮಿನ (ಪಾಲಿಸ್ತಾನ) ಮೇಲೆ (ಕ್ರಿಶ್ಚನ್, ಯಹೂದ್ಯ, ಮುಸ್ಲಿಂ,—ಮೂವರಿಗೂ ಅದು ಪುಣ್ಯಸ್ಥಳ) ಕಳೆದ ವಾರ ಅರಬ ಸ್ವಾತಂತ್ರ್ಯವಾದಿಗಳು ಗುಂಡಿನ ಮಳೆಗರೆದರು. ಪವಿತ್ರ ಗೋರಿಯ ಕೆಲವೇ ಗಜ ದೂರದಲ್ಲಿ ಗುಂಡುಗಳು ಬಂದು ಬಿದ್ದವು. ಕಳೆದ ಯುದ್ಧಾಂತ್ಯದಲ್ಲಿ ಬ್ರಿಟಿಶ ಸೇನಾನಾಯಕರು ಈ ನಗರವನ್ನು ಒಂದೇ ಒಂದು ಗುಂಡು ಹಾರಿಸದೆ ವಶಪಡಿಸಿಕೊಂಡ ಭೂಷಣ ಕೊಚ್ಚಿಕೊಂಡಿದ್ದರು. ಆದರೆ ಈಗ ಆ ನಗರ ಧ್ವಂಸವಾಗುವುದನ್ನು ಅವರ ಉಚ್ಚಾಧಿಕಾರಿ ಹೈಕಮಿಶನರ್ ಕನಿಂಗ್ಹಾಮ ತಡೆಯಲು ಸಮರ್ಥರಾಗಲಿಲ್ಲ. ಬದಲಿಗೆ ಈ ರಕ್ತಪಾತದಿಂದ ಯಹೂದಿಗೇನು ಪುರುಷಾರ್ಥ? ಎರಡು ವಿಶೇಷದ ಪಡೆಗಳು ಹೋರಾಡುವ ಪ್ರದೇಶದ ಕೆಲ ಕಾಲವಾದರೂ ಸಂಧಿ ಮಾಡಿಕೊಳ್ಳಲೆಂದು ಕೇಳಿಕೊಂಡರು. ಪವಿತ್ರ ನಗರಕ್ಕೆ ಗುಂಡುಗಳು ಬಿದ್ದದ್ದು ನೋಡಿ ಗುಡುಗಿದ್ದರೂ ಇದಕ್ಕೆ ಒಪ್ಪಿದರೂ ಅದು ನೆರವೇರುವಂತೆ ಕಾಣುವದಿಲ್ಲ. ಪಾಲಿಸ್ತಾನ ವಿಭಜನ ಯೋಜನೆಯ ಹಿಂದಿದ್ದ ಪ್ರಬಲತಮ ಶಕ್ತಿಯಾದ ಅಮೇರಿಕೆಯು ಬಾಲ ಮುದುಡಿ ಯಹೂದ್ಯರ ಕೈಬಿಟ್ಟದ್ದರಿಂದ ಅರಬ ಹುಂಬದ ಹುರುಪು ಹೆಚ್ಚಿದಂತೆ ತೋರುತ್ತದೆ. ಮೇಲಾಗಿ ಕಳೆದ ವಾರ ಜರುಸಲೇಮು ಮುಫ್ತಿಯ ಮನೆತನಕ್ಕೆ ಸೇರಿದ ಅಬ್ದುಲ್ ಹುಸೇನಿ ಒಂದು ಯಹೂದ್ಯ ಗುಂಡಿಗೆ ಆಹುತಿಯಾದುದರಿಂದ ಅರಬರ ಕ್ರೋಧ ಇನ್ನಷ್ಟು ಹೆಚ್ಚಿರಬೇಕು. ಈಚೆಗೆ ಯಹೂದ್ಯರು ಒಂದು ಅರಬ ಹಳ್ಳಿಯನ್ನು ಧ್ವಂಸಗೊಳಿಸಿ ೨೦೦ ಕ್ಕಿಂತ ಹೆಚ್ಚು ಜನರನ್ನು ಕೊಲೆ ಮಾಡಿದ ಸಿಟ್ಟು ಇಳಿದಿಲ್ಲ. ಸಿರಿಯನ್ ಅರಬ ಸೈನಿಕರು ಪಾಲಿಸ್ತಾನದ ಯಹೂದ್ಯ ಗ್ರಾಮಗಳ ಮೇಲೆ ದಾಳಿ ಮಾಡುತ್ತಿದ್ದಾರೆಂದು ಸುದ್ದಿ ಬಂದಿದೆ. ಅತ್ತ ಯುಕ್ತ ರಾಷ್ಟ್ರ ಸಂಘ ಬರಿ ವಾದ-ಚರ್ಚೆಗಳಲ್ಲಿ ಕಾಲಕ್ಷೇಪ ಮಾಡುತ್ತಿರುವಾಗ ಮೇ ೧ ನೇ ತಾರೀಖಿಗೇನೇ ಪವಿತ್ರ ಭೂಮಿಯನ್ನು ಅದರ ಪಾಡಿಗೆ ಬಿಟ್ಟು ಬ್ರಿಟಿಶರು ಪಾಲಿಸ್ತಾನದಿಂದ "ಚಲೇಜಾವ" ಮಾಡುವರಂತೆ. ಆಗ ಅರಬರೂ ಯಹೂದ್ಯರೂ ತಮ್ಮ ಶಕ್ತಿ ಪರೀಕ್ಷೆ ಮಾಡಲಿ.

## ಫ್ರೆಂಚ ಕೈಗೊಂಬೆಯಾಗಲು ಬಾವ—ದಾಯಿಯ ನಕಾರ

ಇಂಡೋಚೀನದ ಸ್ವಾತಂತ್ರ್ಯವಾದಿಗಳನ್ನು ಶೀಘ್ರವಾಗಿ ಮಣಿಸುವ ಆಸೆ ಮಣ್ಣಾಗಿ ಸಾಮ್ರಾಜ್ಯವಾದಿ ಫ್ರೆಂಚರು ಜಗತ್ತಿನ ಕಣ್ಣಿಗೆ ಮಣ್ಣು ಹಾಕಲು ಕೈಗೊಂಬೆಗಳನ್ನು ಹುಡುಕುತ್ತಿದ್ದಾರೆ. ರಾಜ್ಯತ್ಯಾಗ ಮಾಡಿ ಹಾಂಗಕಾಂಗಿನಲ್ಲಿ ನೆಲಸಿರುವ ಹಿಂದಿನ ಅನ್ನಂ ಚಕ್ರವರ್ತಿ ಬಾವ-ದಾಯಿಯನ್ನು ಇದಕ್ಕಾಗಿ ಹಿಡಿಕೆ ನೋಡಿದರವರು. ಭೂತಪೂರ್ವ ಚಕ್ರವರ್ತಿ ಬಾವ ದಾಯರಿಗೆ ಅನ್ನಂ ಬದಲಿಗೆ ಇಡಿ ಇಂಡೋಚೀನವೇ ಕೈಗೆ ಬರುವಂತಿದ್ದರೆ ಅವರೇಕೆ ಬೇಡವೆಂದಾರು? ಆದರೆ ತೊಂದರೆಯಾದದ್ದಿಷ್ಟೇ: ಅವರಿಗೆ ಬರಿ ಕೈಗೊಂಬೆಯಾಗಿ ಫ್ರೆಂಚರ ಅಂಕಿತದಲ್ಲಿರುವದು ಇಷ್ಟವಿದ್ದಿಲ್ಲ, ಇಲ್ಲವೆ ಧೈರ್ಯವಿದ್ದಿಲ್ಲ. ಇಂಡೋಚೀನದ ಫ್ರೆಂಚ ಆಡಳಿತಗಾರ ಬೊಲರೆಯವರು ಕಳೆದ ವಾರ ಬಾವ ದಾಯರ ಹತ್ತಿರ ನಡೆಸಿದ ಮಾತುಕತೆಗಳಲ್ಲಿ ಅಧಿಕಾರ ದಾನದ ಪ್ರಮಾಣದ ವಿಷಯಕ್ಕೆ "ಮತಭೇದ" ವಾಯಿತಂತೆ. ಮೇಲಾಗಿ ಇಂಡೋಚೀನದ ಪ್ರಜಾರಾಜ್ಯದ ಅಧ್ಯಕ್ಷ ಹೋ-ಚಿ ಮಿನ್ಹರು ಸೇರದ ಯಾವದೇ ಮಂತ್ರಿಮಂಡಲವನ್ನು ರಚಿಸಿಕೊಳ್ಳಲು ಭೂತಪೂರ್ವ ಚಕ್ರವರ್ತಿ ಒಪ್ಪಲಿಲ್ಲ. ದೇಶದ ವಿಸ್ತಾರ ಪ್ರದೇಶಗಳು ಹೋ-ಚಿ ಮಿನ್ಹರ ಅನುಯಾಯಿಗಳ ಕೈಯಲ್ಲಿದ್ದಾಗ ಅವರಿಲ್ಲದೆ ಯಾವುದೂ ಬಗೆಹರಿಯದೆಂದು ಬಾವ ದಾಯರು ಎಣಿಸಿದ್ದು ಸಹಜ. ಹೀಗೆ ಇಂಡೋಚೀನದಲ್ಲಿ ಯಾರೂ ತಿರುಳು ಬಿಟ್ಟು ಸಿಪ್ಪೆಯನ್ನು ತೆಗೆದುಕೊಳ್ಳಲೊಲ್ಲದ್ದರಿಂದ ನಿರಾಶನಾದ ಫ್ರೆಂಚ ಅಧಿಕಾರಿಯೊಬ್ಬ ಗುಣುಗುಟ್ಟಿದ್ದು: "ಇಂಡೋಚೀನದಲ್ಲಿ ಇನ್ನೂ ಎರಡು ವರ್ಷ ಯುದ್ಧವೇ ನಡೆಯಬೇಕು ಬೇರೆ ವಿಧಿಯಿಲ್ಲ."

## ರಶಿಯಾ—ಬ್ರಿಟನ್ ಸಂಧಿ?

ಬ್ರಿಟಿಶ ಕಾರ್ಮಿಕ ಸರಕಾರ ಅಮೇರಿಕೆಯಂತೆ ರಶಿಯಾದ ನಿಷ್ಠುರತೆಯನ್ನು ಕಟ್ಟಿಕೊಳ್ಳಲು ಸಿದ್ಧವಿಲ್ಲೆಂದು ಕಳೆದ ವಾರದ ವಿದ್ಯಮಾನಗಳು ತೋರಿಸಿಕೊಟ್ಟವು. ಬ್ರಿಟಿಶ "ವೈಕಿಂಗ್" ವಿಮಾನವೊಂದು ರಶಿಯನ್ ಆಕ್ರಮಿತ ಜರ್ಮನ್ ಪ್ರದೇಶದಲ್ಲಿ ರಶಿಯನ್ ಯುದ್ಧ ವಿಮಾನಕ್ಕೆ ಢಿಕ್ಕಿ ಹೊಡೆದುದನ್ನು ದೊಡ್ಡ ಬೌ ಮಾಡದೆ ನಯಮಾರ್ಗವನ್ನು ಅನುಸರಿಸಿದ್ದಕ್ಕೆ ಅನೇಕ ಬ್ರಿಟಿಶ ಕಾನ್ಸರ್ವೇಟಿವ ಪತ್ರಿಕೆಗಳು ಬೆವಿನ್ನರ ಮೇಲೆ ಸಿಟ್ಟಿಗೆದ್ದಿವೆ. ಆರೋಪ—ಪ್ರತ್ಯಾರೋಪಗಳ ಸಂಗಳಾಚರಣೆ ಮುಗಿದ ಮೇಲೆ ರಶಿಯನ್ ಸೂಚನೆಯಂತೆ ಈ ಘಟನೆಯ ವಿಚಾರಣೆ ನಡೆಸಲು ರಶಿಯಾ—ಬ್ರಿಟಿಶ ಜಂಟಿ ಸಮಿತಿಯನ್ನು ನೇಮಿಸಲು ಬ್ರಿಟಿಶರು ಒಪ್ಪಿದ್ದರಿಂದ ಉಭಯ ರಾಷ್ಟ್ರಗಳ ಸಂಬಂಧ ಎಷ್ಟೋ ತಿಳಿಯಾಗಿದೆ.

ಆದರೆ ಇದರಿಂದ ಬರ್ಲಿನ್ ನಗರದಲ್ಲಿರುವ ಬ್ರಿಟಿಶ, ಅಮೇರಿಕನ್, ಫ್ರೆಂಚ ಅಧಿಕಾರಿಗಳನ್ನು ಅಲ್ಲಿಂದ ಹಳಕಿತ್ತಿಸುವ ಇಲ್ಲವೆ ಕನಿಷ್ಠ ಅವರ ಅಸ್ತಿತ್ವವನ್ನು ಸಾಧ್ಯವಿದ್ದಷ್ಟು ನಿಷ್ಫಲವಾಗಿ ಮಾಡುವ ರಶಿಯನ್ ನಿರ್ಧಾರ ಕಡಿಮೆಯಾಗಿದೆಯೆಂದಲ್ಲ. ಬರ್ಲಿನ್ನಿನಿಂದ ಬ್ರಿಟಿಶ, ಫ್ರೆಂಚ ಹಾಗು ಅಮೇರಿಕನ್ ಆಕ್ರಮಿತ ಜರ್ಮನ್ ವಿಭಾಗಗಳಿಗೆ ಇರುವ ಟೆಲಿಫೋನ್ ಸಂಪರ್ಕವನ್ನು ತಾವೇ ಕೈಯಲ್ಲಿ ತೆಗೆದುಕೊಂಡು ರಶಿಯನ್ನರು ಬರ್ಲಿನ್ನಿನಿಂದ ಈ ತ್ರಿಪಕ್ಷಗಳಿಗೆ ಯಾವ ಗುಟ್ಟನ್ನೂ ಟೆಲಿಫೋನ್ ಮೂಲಕ ಹೊರಗೆ ಕಳಿಸಲು ಸಾಧ್ಯವಾಗದಂತೆ ಮಾಡಿದ್ದಾರೆ. ಸಾಲದ್ದಕ್ಕೆ ಬರ್ಲಿನ್ನಿನಿಂದ ಈ ಮೂರು ವಿಭಾಗಗಳಿಗೆ ಹೋಗುವ ಮೋಟಾರ ರಸ್ತೆಯ ಮೇಲಿನ ಬ್ರಿಟಿಶ ಮತ್ತು ಅಮೇರಿಕನ್ ಮೋಟಾರ ಉಪಕರಣ ಶಾಲೆಗಳನ್ನು ಈ ತಿಂಗಳ ಅಂತ್ಯದೊಳಗೆ ಮುಚ್ಚಬೇಕೆಂದು ಅಜ್ಞಾಪಿಸಿದ್ದಾರೆ. ಬರ್ಲಿನ್ನು ರಶಿಯನ್ ಆಕ್ರಮಿತ ಪ್ರದೇಶದಲ್ಲೊಂದು ದ್ವೀಪದಂತಿದೆ. ಅಲ್ಲಿಂದ ಉಳಿದವರ ಆಕ್ರಮಿತ ಪ್ರದೇಶಗಳಿಗೆ ಕನಿಷ್ಠ ನೂರು ಮೈಲು ದೂರ. ಹೀಗೆ ತಮ್ಮ ಭಾಗದ ಆಡಳಿತೆ ಸಾಗಿಸಲು ಅವರನ್ನು ಬರ್ಲಿನ್ ನಗರದ ತಮ್ಮ ಪ್ರದೇಶಗಳನ್ನು ಕೇಂದ್ರವಾಗಿ ಉಪಯೋಗಿಸುವದು ಅಸಾಧ್ಯವಲ್ಲದಿದ್ದರೂ ಕಠಿನವಾಗುವದು. ಆದರಿಂದ ಅವರು ಬರ್ಲಿನ್ನನ್ನು ಪೂರ್ಣವಾಗಿ ಅಲ್ಲದಿದ್ದರೂ ಬಹ್ವಂಶ ಬಿಟ್ಟು ಹೋಗಲೇಬೇಕಾದೀತು.

## ಇಟಲಿಯ ಚುನಾವಣೆಗಳು

ಏಪ್ರಿಲ ೧೮ ಕ್ಕೆ, ಈ ಸುಚಿಕೆ ಓದುಗರ ಕೈ ಸೇರುವಷ್ಟರಲ್ಲೆ, ಇಟಲಿಯಲ್ಲಿ ಮಹಾ ಚುನಾವಣೆಗಳು ನಡೆಯುವವು. ಸಂಗಡಲೇ ಇಟಲಿಯ ಹಣೆಬರಹವೂ ನಿಶ್ಚಯಿಸಲ್ಪಡುವದು. ಕಮ್ಯುನಿಸ್ಟರು ಚುನಾವಣೆಯಲ್ಲಿ ಜಯಶಾಲಿಗಳಾಗದಂತೆ ತಡೆಯಲು ಪ್ರತಿಗಾಮಿಗಳು ಕೆಥೋಲಿಕ್ ಪಕ್ಷದವನಾದ ಮುಖ್ಯ ಮಂತ್ರಿ ಗಾಸ್ಪೇರಿಯ ನೇತೃತ್ವದಲ್ಲಿ ಶತಪ್ರಯತ್ನ ಮಾಡುತ್ತಿದ್ದಾರೆ. ಅವನಿಗೆ ಆಂಗ್ಲೋ—ಅಮೇರಿಕನ್ನರ ಬೆಂಬಲವೂ ಇದೆ. ಗಾಸ್ಪೇರಿ ಪುಂಜಕ್ಕೇ ಇಟಾಲಿಯನ್ನರು ಮತವೀಯುವಂತೆ ಒಲಿಸಲು ಟ್ರಿಯಸ್ಟೆ ಪ್ರಶ್ನೆಯನ್ನು ಆಂಗ್ಲೋ—ಅಮೇರಿಕನ್ನರು ಮೇಲೆತಂದಿದ್ದಾರೆ. ಟ್ರಿಯಸ್ಟೆಯನ್ನು ತಿರುಗಿ ಇಟಲಿಗೆ ಕೊಡಬೇಕೆಂದು ಸೂಚಿಸುವದು ಮಾತ್ರವಲ್ಲ, ಆ ನಗರದಲ್ಲಿ ತಮ್ಮ ಆಡಳಿತೆಗೆ ಸೇರಿದ ಭಾಗಗಳನ್ನು ಅವರು ಇಟಾಲಿಯನ್ನರಿಗೆ ಕಳೆದವಾರ ಒಪ್ಪಿಸಿಕೊಡ ಬಿಟ್ಟರು. ಇದರಿಂದ ಆ ನಗರದ ಮೇಲೆ ಯುಗೋಸ್ಲಾವಿಯಾದ ಬೇಡಿಕೆಗೆ ಬೆಂಬಲವಿತ್ತ ರಶಿಯಾದ ಪುಂಜಗಳಾದ ಕಮ್ಯುನಿಸ್ಟರಿಗೆ ಒಳ್ಳೇ ಪೇಚು ಗಂಟುಬಿದ್ದಿದೆ. ಚುನಾವಣೆಗಳಲ್ಲಿ ಹಿಂಸಾಚಾರವೂ ಬೇಕಾದಷ್ಟು ಜರಗಬಹುದೆಂದು ತೋರುತ್ತದೆ. ಈಗಾಗಲೆ ಗಾಸ್ಪೇರಿ ಪಕ್ಷದ ಪ್ರಚಾರಕರನ್ನೂ ರಾಜಕಾರಣಿಗಳನ್ನೂ ಬಡಿಯುವದು, ಕೊಲ್ಲುವದು ನಡೆದಿದೆ. ಮೊನ್ನೆ ಹಡಗೊಂದರಲ್ಲಿ ೮೦೦೦ ರೈಫಲ್ಲುಗಳೂ ೬೦ ಲಕ್ಷ ಸುತ್ತು ಮದ್ದುಗುಂಡುಗಳೂ ಎಲ್ಲಿಗೋ ಹೊರಟದ್ದು ಕಂಡುಬಂತು. ಅದೆಲ್ಲ ಕಮ್ಯುನಿಸ್ಟರು ಯುಗೋಸ್ಲಾವಿಯಾದಿಂದ ತರಿಸಿದ್ದೆಂದು ಆರೋಪಿಸಲಾಗಿದೆ. ಕಮ್ಯುನಿಸ್ಟರಿಗೆ ಇಟಲಿಯಲ್ಲಿ ಜಯದೊರೆತರೆ ಭೂಮಧ್ಯ ಸಮುದ್ರದಲ್ಲಿ ಅವರಿಗೆ ಪ್ರಬಲವಾದ ಸ್ಥಾನ ದೊರೆತು ಪಾಶ್ಚಿಮಾತ್ಯ ಪಕ್ಷದ ಬಲ ಕುಂದದಿರದು.

## ದಕ್ಷಿಣ ಆಫ್ರಿಕೆಯಲ್ಲಿ ಸತ್ಯಾಗ್ರಹ

ಒಂಭತ್ತು ಜನ ಹಿಂದೀ ಸತ್ಯಾಗ್ರಹಿಗಳೂ ಮಹಾತ್ಮಾ ಗಾಂಧಿಯವರ ಪುತ್ರ ಶ್ರೀ ಮಣಿಲಾಲರೂ ಕಳೆದ ವಾರ ಹಿಂದೀ ವಿರೋಧಿ ಕಾಯದೆಯನ್ನು ಮುರಿದು ದ. ಆಫ್ರಿಕೆಯ ನಾತಾಳ ಪ್ರಾಂತದಿಂದ ಟ್ರಾನ್ಸವಾಲಿಗೆ ಕಾಲಿಟ್ಟರು. ಮತ್ತು ಅದೇ ಹೊತ್ತಿಗೆ ಐವರು ಟ್ರಾನ್ಸವಾಲ ಹಿಂದೀಯರು ನಾತಾಳಕ್ಕೆ ಕಾಲಿಟ್ಟು ಶಾಸನಭಂಗ ಮಾಡಿದರು. ೧೯೧೩ ರ, ಹಿಂದೀಯರನ್ನು ಅಪ್ಪಣೆಯಿಲ್ಲದೆ ಪ್ರಾಂತದಿಂದ ಪ್ರಾಂತಕ್ಕೆ ಹೋಗದಂತೆ ಪ್ರತಿಬಂಧಿಸುವ ಕಾಯದೆಯ ಭಂಗ ಪ್ರಾರಂಭವಾದಾಗ ಸಾವಿರಾರು ಜನ ಪ್ರೇಕ್ಷಕರು ಗಡಿಯಲ್ಲಿ ಸೇರಿದ್ದರು. ಕಾಯದೆ ಭಂಗ ಮಾಡಿದವರಲ್ಲಿ ಮಣಿಲಾಲರನ್ನು ಬಿಟ್ಟು ಉಳಿದವರೆಲ್ಲರನ್ನೂ ಬಂಧಿಸಿ ಬಿಳಿಯರ ಸರಕಾರ ಯಾವುದೋ ಗತ್ತು ನಡೆಸಿದೆ. ಬಂಧಿಸಲ್ಪಟ್ಟವರಲ್ಲಿಲ ಜನರಿಗೆ ೩—೩ ತಿಂಗಳ ಸಶ್ರಮ ಶಿಕ್ಷೆ ವಿಧಿಸಲ್ಪಟ್ಟಿತು. ೯ ನೆಯವನಿಗೆ ಮಾತ್ರ ೩ ತಿಂಗಳ ಶಿಕ್ಷೆಯಲ್ಲದೆ ಅಲ್ಪಾಹಾರ ಮತ್ತು ವಾರಕ್ಕೆರಡು ದಿನ ಅಂಧೇರಿ ವಾಸ ವಿಧಿಸಲ್ಪಟ್ಟಿದೆ.

## ರಾಮನ್ ಪರಿಣಾಮ ಮತ್ತು ರಾಮನ್ನರ ಮೇಲೆ ಪರಿಣಾಮ

ಭಾರತದ ಪ್ರಮುಖ ವಿಜ್ಞಾನಿ ಸರ್ ಸಿ. ವಿ. ರಾಮನ್ನರು ಕಂಡುಹಿಡಿದ ಪ್ರಸಿದ್ಧ "ರಾಮನ್ ಪರಿಣಾಮ" ಪ್ರಕಾಶ ಕಿರಣಗಳ ಸ್ವಭಾವವನ್ನು ಕುರಿತ ಸಂಶೋಧನದ ೨೦ ನೆಯ ವಾರ್ಷಿಕೋತ್ಸವ ಫ್ರಾನ್ಸಿನ ಬಾರ್ಡೋ ವಿಶ್ವವಿದ್ಯಾಲಯದಲ್ಲಿ ಕಳೆದ ವಾರ ಜರುಗಿತು. ಮುತ್ತುಗಳನ್ನು ಕುರಿತ ತಮ್ಮ ಹೊಸ ಶೋಧಗಳನ್ನು ವಿಜ್ಞಾನಿಗಳ ಮುಂದಿಡಲು ಫ್ರಾನ್ಸಿಗೆ ಹೋಗಿರುವ ಸರ್ ಸಿ. ವಿ. ರಾಮನ್ನರು ಸ್ವತಃ ಸಮಾರಂಭದಲ್ಲಿ ಉಪಸ್ಥಿತರಾಗಿದ್ದರು. ಅವರಿಗೆ ವಿಶ್ವವಿದ್ಯಾಲಯ ಅಂದೇ ಡಾಕ್ಟರ ಬಿರುದನ್ನು ಕೊಟ್ಟಿತು. ಸಮಾರಂಭದ ಅಂಗವಾದ ಸತ್ಕಾರ ಕೂಟದಲ್ಲಿ ಯಥೇಷ್ಟ ಮದ್ಯಪಾನವೂ ಇತ್ತು. ಆಚಾರವಂತ ಅಯ್ಯರ ರಾಮನ್ನರು ಅದರಲ್ಲಿ ಭಾಗವಹಿಸಲು ಎಷ್ಟೋ ಒತ್ತಾಯ ಬಂದರೂ ಒಪ್ಪಲಿಲ್ಲ. ಅದಕ್ಕೆ ಒಬ್ಬ ವಿಜ್ಞಾನಿಗೆ ಥಟ್ಟನೆ ರಸಾವೇಶವಾಗಿ ಹೇಳಿದರು "ಮದ್ಯದ ಮೇಲೆ ರಾಮನ್ ಪರಿಣಾಮವನ್ನರಿತ ವಿಜ್ಞಾನಿಗಳು ಈಗ ರಾಮನ್ನರ ಮೇಲೆ ಮದ್ಯದ ಪರಿಣಾಮವನ್ನು ಅರಿಯಲು ಆತುರರಾದಂತಿದೆ!"

ಸಭೆಯೆಲ್ಲ ನಗೆಗಡಲಲ್ಲಿ ತೇಲಿತು.

ಮೊನ್ನೆ ಫೆಬ್ರುವರಿ ಪ್ರಾರಂಭವಾದ ಮಲಯ ಸಂಯುಕ್ತ ಘಟನೆಯಲ್ಲಿ ಸೇರಿದ ಮಲಯ ಸಂಸ್ಥಾನಿಕರ ಸಮ್ಮೇಲನ. ಜೊಹೋರ ಸುಲ್ತಾನರು ಅಧ್ಯಕ್ಷ ಪದದಿಂದ ಮಾತಾಡುತ್ತಿದ್ದಾರೆ.

ಶ್ರೀ ಆರ್. ಆರ್. ಸಕ್ಸೇನಾ

ನ್ಯೂಯಾರ್ಕಿನಲ್ಲಿ ಭಾರತದ ಪ್ರಥಮ ಕಾನ್ಸಲ ಜನರಲ್ಲರು.

# ಬಡೋದೆಯ ಪ್ರಜೆಗಳಿಗೆ ವಿಜಯ

## ಹೊಣೆಗಾರ ಸರಕಾರದ ಘೋಷಣೆ

ಬಡೋದಾ ಸಂಸ್ಥಾನದಲ್ಲಿ ಕಳೆದ ಕೆಲ ದಿನಗಳಿಂದ ಹೊಣೆಗಾರ ಸರಕಾರದ ಬಗ್ಗೆ ಆಂದೋಲನ ನಡೆದಿತ್ತು. ಈಗ ಪ್ರಜೆಗಳಿ ಜಯ ದೊರಕಿದೆಯೆಂಬುದು ಸಂತೋಷದ ಸಂಗತಿ. ತಾ. ೧೧ ರಂದು ಬಡೋದೆಯ ಮಹಾರಾಜರು ಹೊಣೆಗಾರ ಸರಕಾರ ಸ್ಥಾಪಿಸುವ ಕುರಿತು ಘೋಷಣ ಮಾಡಿದಾರೆ.

ಮಹಾರಾಜರು ಬಡೋದೆಯ ಶಾಸನ ಸಭೆಯಲ್ಲಿ ಮಾತನಾಡುತ್ತ ಹೀಗೆ ಹೇಳಿದರು. “ವಯಸ್ಕರ ಮತಾಧಿಕಾರ ಪದ್ಧತಿಯನ್ವಯ ಘಟನಾ ಸಮಿತಿಯನ್ನು ರಚೀಲಾಗುವದು. ಈ ಸಮಿತಿಗೆ ಪೂರ್ಣ ಸಾರ್ವಭೌಮತ್ವದ ಅಧಿಕಾರ ಕೊಡಲಾಗುವದು. ರಾಜರ ವೈಯಕ್ತಿಕ ವ್ಯಯ, ವಿದೇಶ ಸಂಬಂಧ, ಸೈನ್ಯಪಡೆ ಮೊದಲಾದ ವಿಷಯಗಳನ್ನು ಬಿಟ್ಟು ಉಳಿದೆಲ್ಲ ವಿಷಯಗಳ ಮೇಲೆ ಈ ಸಮಿತಿಗೆ ಅಧಿಕಾರವಿದೆ. ಧಾರಾಸಭೆಯ (ಶಾಸನ ಸಭೆ) ಬಹುಮತ ಪಕ್ಷದ ಪ್ರತಿನಿಧಿಗಳುಳ್ಳ ನಡುಗಾಲ ಸರಕಾರವನ್ನು ಕೂಡಲೆ ಸ್ಥಾಪಿಸಲಾಗುವದು. ದಿವಾಣರು ಸರಕಾರದ ನಾಮಕರಣ ಸದಸ್ಯರಾಗುವರು.”

ಪ್ರಜಾಮಂಡಲದ ಅಧ್ಯಕ್ಷರಾದ ಶ್ರೀ ಚಿಮನಲಾಲ ಶಹಾರವರು ಮಹಾರಾಜರ ಈ ಹೆಜ್ಜೆಯನ್ನು ಹೊಗಳಿದರು. ೧೯೪೬ ರಲ್ಲಿ ಪ್ರಜಾಮಂಡಲವು ತನ್ನ ಗೊತ್ತುವಳಿಯಲ್ಲಿ ಹೊಣೆಗಾರ ಸರಕಾರ ಸ್ಥಾಪನೆಯ ಬಗ್ಗೆ ನಿರ್ದಿಷ್ಟ ಪಡಿಸಿದ ದಿನದೊಳಗೇ ಅದು ಅಸ್ತಿತ್ವದಲ್ಲಿ ಬಂದುದಕ್ಕೆ ಅತ್ಯಂತ ಸಂತೋಷ ವ್ಯಕ್ತ ಪಡಿಸಿದರು.

ಪ್ರಜಾಮಂಡಲದ ವಕ್ತಾರರಾದ ದರ್ಬಾರ ಗೋಪಾಲದಾಸ ದೇಸಾಯಿ ಅವರು ಮಹಾರಾಜರನ್ನು ಈ ಬಗ್ಗೆ ಅಭಿನಂದಿಸಿದರು. ಭಾರತ ಒಕ್ಕೂಟದಲ್ಲಿ ಸೇರಿದ ಸಂಸ್ಥಾನಗಳಲ್ಲಿ ಬಡೋದೆಯು ಮೊದಲಿನದು. ಮಹಾರಾಜರು ರಾಷ್ಟ್ರೀಯ ಧುರೀಣರ ಪ್ರೀತ್ಯಾದರಗಳಿಗೆ ಸಂಪೂರ್ಣ ಪಾತ್ರರಾಗಿದ್ದಾರಲ್ಲದೆ ಹೊಣೆಗಾರ ಸರಕಾರದ ಘೋಷಣೆ ಮಾಡಿರುವದರಿಂದ ಇನ್ನೂ ಅವರು ಪ್ರಜೆಗಳ ಪ್ರೀತಿ ವಿಶ್ವಾಸಗಳಿಗೂ ಪಾತ್ರರಾಗುವರು ಎಂದು ಮೊದಲಾಗಿ ಉದ್ಗಾರ ತೆಗೆದರು.

# ಕಾಶ್ಮೀರದ ಯುದ್ಧರಂಗ

ಕಾಶ್ಮೀರ ಮತ್ತು ಜಮ್ಮುಗಳಲ್ಲಿ ಈಗ ೩೦ ಸಾವಿರ ದಾಳಿಗಾರರು ಬೇರೆ ಬೇರೆ ಭಾಗಗಳಲ್ಲಿ ಹೋರಾಡುತ್ತಿರುವರೆಂದು ಅಧಿಕೃತವಾಗಿ ತಿಳಿದು ಬರುತ್ತದೆ. ಇವರಲ್ಲಿ ಸುಮಾರು ೭ ಸಾವಿರ ದಾಳಿಗಾರರು ಕಾಶ್ಮೀರ ಕೊಳ್ಳದಲ್ಲಿ, ೧೩ ಸಾವಿರ ದಾಳಿಗಾರರು ಜಮ್ಮು ಪ್ರಾಂತದ ನೌಶೇರಾ, ಪೂಂಚ ಮತ್ತು ಬಿಂಭರ ವಿಭಾಗಗಳಲ್ಲಿರುವರಾಗಿ ತಿಳಿಯುತ್ತದೆ.

## ಜಮ್ಮು ಪರಿಸ್ಥಿತಿಯಲ್ಲಿ ಸುಧಾರಣೆ

ಕಳೆದ ವಾರದಲ್ಲಿ ಜಮ್ಮು ಪ್ರಾಂತದ ಪರಿಸ್ಥಿತಿಯಲ್ಲಿ ಸುಧಾರಣೆ ಕಂಡುಬಂದಿದೆಯಲ್ಲದೆ ಹೆಚ್ಚು ಹೆಚ್ಚು ಜನರು ತಮ್ಮ ಊರಿಗೆ ಬರುತ್ತಿದ್ದಾರೆ. ಪುನರ್ವಶವಾದ ಸ್ಥಳಗಳಲ್ಲಿ ಜನರ ನಿತ್ಯದ ವ್ಯವಹಾರಗಳು ಸುಗಮವಾಗಿ ಸಾಗಿವೆ. ಪುನರ್ನಿವೇಶನ ಕಾರ್ಯಕ್ಕೆ ಸಹಾಯ ಸಲ್ಲಿಸಲು ಬಧ್ರಾವಾಕ್ಕೆ ಸಹಾಯ ಸಮಿತಿಯನ್ನು ಕಳುಹಲಾಗಿದೆ. ಜಮ್ಮುದ ಜಿಲ್ಹಾಧಿಕಾರಿಗಳು ಕೆಲಸದ ಮೇಲೆ ಹಾಜರಾಗಲು ಹಳ್ಳಿಯ ಮುಖ್ಯಸ್ಥರಿಗೆ ತಿಳಿಸಿದ್ದಾರೆ.

## ಮಹಿಳೆಯರೂ ರಣರಂಗಕ್ಕೆ

ಜಮ್ಮು ಮತ್ತು ಕಾಶ್ಮೀರಗಳಲ್ಲಿ ತರುಣಿಯರಿಗೂ ಶಸ್ತ್ರಾಸ್ತ್ರ ಶಿಕ್ಷಣ ಕೊಡಲಾಗುತ್ತಿದೆ. ಕಾಶ್ಮೀರದ ಮಹಾರಾಣಿಯವರೂ ಬೇಗಂ ಅಬ್ದುಲ್ಲಾರೂ ಈ ಚಟುವಟಿಕೆಯಲ್ಲಿ ಬಹಳ ಮನಸ್ಸು ಹಾಕಿ ದುಡಿಯುತ್ತಿದ್ದಾರೆ. ಒಬ್ಬ ಸೈನ್ಯಾಧಿಕಾರಿಯೇ ಈ ಬಗ್ಗೆ ಹೀಗೆ ಬಣ್ಣಿಸಿದ್ದಾರೆ:—

“ನಾನೊಮ್ಮೆ ಈ ಸ್ತ್ರೀ ಸೈನ್ಯದ ಮೇಲ್ವಿಚಾರಣೆಗೆ ಹೋದಾಗ ೫೫ ವರ್ಷದ ಮಹಿಳೆಯೊಬ್ಬಳು ಬಂದೂಕನ್ನು ಹೆಗಲಿಗಿಟ್ಟು ಚುರುಕಾಗಿ ನಿಂತಿದ್ದನ್ನು ಕಂಡೆ. ತಾಯೀ, ನೀವೇಕೆ ಇಲ್ಲಿ ಎಂದು ನಾನು ಕೇಳಲು ನಾಡಸೇವೆಗಾಗಿ ಎಂದು ಕೂಡಲೆ ಉತ್ತರಬಂದಿತು.”

ಬಿಟ್ಟು ಹೋದ ಹಳ್ಳಿಗಳಿಗೆ ಜನರು ಮರಳುತ್ತಿರುವರಷ್ಟೇ ಅಲ್ಲ; ಜನತೆ ಮತ್ತು ಹಿಂದಿ ಸೈನಿಕರಲ್ಲಿ ಸೌಹಾರ್ದ ಬೆಳೆಯುತ್ತಿದೆ. ನಿರಾಶ್ರಿತ ಹೆಂಗಸರು ಹಾಗೂ ಮಕ್ಕಳುಗಳಿಗಾಗಿ ಸೈನಿಕರು ತಮ್ಮ ಹಾಲು ಮತ್ತು ಇತರ ಸೀದಾಪದಾರ್ಥಗಳನ್ನು ಬಿಟ್ಟುಕೊಡುತ್ತಿದ್ದಾರೆ.

## ನಾವೇಕೆ ಏರಿಹೋಗುತ್ತಿಲ್ಲ?

ದಾಳಿಗಾರರನ್ನು ತಡೆಗಟ್ಟುತ್ತ ಸಾಗುವ ಬದಲು ಅವರ ಮೇಲೆ ಏರಿ ಏಕೆ ಹೋಗುವದಿಲ್ಲ ಎಂಬುದಾಗಿ ಓರ್ವ ಪತ್ರಿಕಾಕರ್ತರು ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತ ಆ ಸೈನ್ಯಾಧಿಕಾರಿಯು “ಪಾಕಿಸ್ತಾನದ ಗಡಿಯೇ ನಮ್ಮ ಮೇರೆ. ಅದರಾಚೆಗೆ ಏರಿಹೋಗಲು ಅಥವಾ ಗುಂಡು ಹಾರಿಸಲು ನಮಗೆ ನಮ್ಮ ಹಿಂದುಸ್ತಾನ ಸರಕಾರದ ಅಜ್ಞೆಯಿಲ್ಲ” ಎಂದು ಹೇಳಿದನು. ಅಧಿಕಾರಿ ಮುಂದರಿಯುತ್ತ, ಕಾಶ್ಮೀರದಲ್ಲಿ ಕಳೆದ ನವೆಂಬರದಿಂದ ಪ್ರಾರಂಭವಾದ ಕದನದಲ್ಲಿ ಒಟ್ಟು ೩ ಸಾವಿರ ದಾಳಿಗಾರರು ಕೊಲ್ಲಲ್ಪಟ್ಟಿದ್ದಾರೆ. ಇದು ಹಿಂದೀಸೈನಿಕರು ಎಣಿಸಿದ ಸಂಖ್ಯೆಯಲ್ಲದೆ ಬರೀ ಊಹೆಯಲ್ಲ ಎಂದೂ ಒಂದು ಹೆಣಬೀಳಬೇಕಿದ್ದರು ಅವರಲ್ಲಿ ಮೂವರಾದರೂ ಗಾಯಗೊಂಡಿರಬೇಕೆಂದೂ ಸೈನ್ಯಶಾಖೆ ಲೆಕ್ಕಮಾಡಿದೆ ಎಂದು ಮೊದಲಾಗಿ ಹೇಳಿದರು.

## ಅವರೂ ಮಾನವರೇ

ಬಂಧಿತರಾದ ದಾಳಿಗಾರರನ್ನು ಕೊಲೆಸುಲಿಗೆ ನಡೆಸಿದ ಅಪರಾಧಿಗಳಂತೆ ಹಿಂದಿ ಸೈನಿಕರು ಏಕೆ ನಡೆಸಿಕೊಳ್ಳುವದಿಲ್ಲ ಎಂದು ಕೇಳಿದ ಪ್ರಶ್ನೆಗೆ ಆ ಅಧಿಕಾರಿ, ದಾಳಿಗಾರರು ಯಾವದೇ ರಾಷ್ಟ್ರದ ಅಧಿಕೃತ ಸೈನಿಕರೆಂದು ಮನ್ನಣೆ ಹೊಂದಿರದಿದ್ದರೂ ಹಿಂದಿ ಸೈನಿಕರು ಅವರನ್ನು ಮಾನವರಂತೆ ಕಾಣುತ್ತಿದ್ದಾರೆ. ಕೆಲ ದಾಳಿಗಾರರಂತೂ ಬಂಧನದನಂತರ ಪಶ್ಚಾತ್ತಾಪಪಟ್ಟು ನಮ್ಮ ಪರವಾಗಿ ಯುದ್ಧಮಾಡಲು ಅಪ್ಪಣೆ ಕೇಳಿದ್ದುಂಟು ಎಂದು ಮುಂತಾಗಿ ಹೇಳಿದರು.

## ದಾಳಿಗಾರ ಮುಖಂಡರಲ್ಲಿ ಮತಭೇದ

೧೫ ನೇ ತಾ. ದಿನಬಂದ ಯುನಾಟೆಡ್ ಪ್ರೆಸ ವರದಿಯ ಪ್ರಕಾರ ದಾಳಿಗಾರರ ಬೆಂಬಲವಿದ್ದ ಆಝಾದ ಕಾಶ್ಮೀರ ಸರಕಾರದ ಅಧ್ಯಕ್ಷ ಸರದಾರ ಇಬ್ರಾಹಿಮಖಾನ ಮತ್ತು ಕಾಶ್ಮೀರ ಮುಸ್ಲಿಂ ಪರಿಷತ್ತಿನ ಚೌಧರಿ ಗುಲಾಮ ಅಬ್ಬಾಸ ಇವರ ನಡುವೆ ತೀವ್ರ ಭಿನ್ನಾಭಿಪ್ರಾಯ ಉಂಟಾದುದರ ಪರಿಣಾಮವಾಗಿ ಆಝಾದ ಕಾಶ್ಮೀರ ಸರಕಾರವನ್ನು ವಿಸರ್ಜಿಸಬಹುದೆಂದು ತಿಳಿಯುತ್ತದೆ.

## ಹಿಂದೀಯರ ಅಪೂರ್ವ ವಿಜಯ

ಇತ್ತ ಹಿಂದೀ ಸೈನಿಕರು ಮಹತ್ವದ ವಿಜಯಗಳನ್ನು ಸಂಪಾದಿಸುತ್ತ ಸಾಗಿದ್ದಾರೆ. ಕಾಶ್ಮೀರದ ರಾಜಕೀಯ ಸುಧಾರಣೆಗಳ ಫಲವಾಗಿ ಕಾಶ್ಮೀರದಲ್ಲಿ ಅಂತಿಮ ವಿಜಯಕ್ಕಾಗಿ ವಿಶ್ವಾಸ ಉಂಟಾಗಿದೆಯೆಂದೂ ಭದ್ರತಾಮಂಡಳದಲ್ಲಿ ನಡೆದ ಚರ್ಚೆಯ ಕಡೆಗೆ ಯಾರೂ ಗಮನಕೊಡುತ್ತಿಲ್ಲವೆಂದೂ ಹೇಳಲಾಗುತ್ತದೆ.

ರಾಜೋರಿ ಕೋಟಲಿ ಮಾರ್ಗದಿಂದ ಕತ್ತಿಗಳೊಡನೆ ಓಡಿಹೋಗುತ್ತಿದ್ದ ವೈರಿಗಳ ಮೇಲೆ ಬಾಂಬಿನ ಮಳೆ ಸುರಿಸಿ ಅವರಿಗೆ ಅಪಾರ ಹಾನಿ ಮಾಡಲಾಗಿದೆ. ಹಿಂದಿ ವೈಮಾನಿಕರು ಈ ಕಾಲಕ್ಕೆ ಸೈನಿಕರಿಗೆ ರಕ್ಷಣೆಕೊಡುತ್ತ ಈ ಚಟುವಟಿಕೆಯಲ್ಲಿ ಭಾಗವಹಿಸುವವಾಗಿ ತಿಳಿಯುವದು. ತಾ. ೧೩ ರ ಸಂಜೆ ಆರು ಗಂಟೆಗೆ ರಾಜೋರಿಯಲ್ಲಿ ಹಿಂದೀ ಸೈನಿಕರು ಪ್ರವೇಶಿಸಿದರು.

# ಕರ್ನಾಟಕದ ಪ್ರಾಚೀನತೆ

## ೬೦೦೦ ವರ್ಷಗಳ ಹಿಂದಿನ ಉಪಕರಣಗಳು

ಪುಣೆಯ ಡೆಕ್ಕನ್ ಕಾಲೇಜಿನ ಶ್ರೀ ಬಿ. ಸುಬ್ಬರಾಯರು ಬಳ್ಳಾರಿ ಜಿಲ್ಹೆಯಲ್ಲಿದ್ದ ಸಂಗನಕಲ್ಲ ಎಂಬ ಹಳ್ಳಿಯಲ್ಲಿ ಕೆಲ ಕಣ್ಣ ಉಪಕರಣಗಳನ್ನು ಅಗೆದು ತೆಗೆದಿದ್ದಾರೆ. ಅವು ಸುಮಾರು ೬ ಸಾವಿರ ವರ್ಷಗಳ ಹಿಂದಿನವಿರಬಹುದೆಂದು ಊಹಿಸಲಾಗಿದೆ. ಇದರಿಂದ ದಕ್ಷಿಣ ಹಿಂದುಸ್ತಾನದ ಇತಿಹಾಸವು ಕ್ರಿ. ಪೂ. ೩ ಸಾವಿರ ವರ್ಷಗಳ ಹಿಂದಿನದೆಂದು ಸಿದ್ಧವಾಗುವ ಸಂಭವವಿದೆ. ಶ್ರೀ ಸುಬ್ಬರಾಯರು ಅ. ಪ್ರೆ. ಗೆ ಈ ಬಗೆಯಾಗಿ ಅರುಹಿದರು:—

ಈ ಉಪಕರಣಗಳು ಯಾವ ಕಾಲದವೆಂಬುದನ್ನು ನಿಶ್ಚಿತ ಹೇಳಲಿಕ್ಕಾಗದು. ಅವು ೬ ಸಾವಿರ ವರ್ಷಗಳ ಹಿಂದಿನವೆಂದು ನನಗನಿಸುತ್ತದೆ. ಇವುಗಳನ್ನು ಕೆಂಬ್ರಿಜ ವಿಶ್ವವಿದ್ಯಾಲಯದ ಪುರಾತನ ವಸ್ತುಶಾಸ್ತ್ರಜ್ಞರ ಬಳಿಗೆ ಕಳಿಸಲಾಗಿದು ಅವರ ವರದಿಯ ಹಾದಿಯನ್ನೆ ನೋಡುತ್ತಿದ್ದೇನೆ.

ಬಳ್ಳಾರಿಯಿಂದ ೪೦ ಮೈಲು ದೂರದಲ್ಲಿರುವ ಬ್ರಹ್ಮಗಿರಿಯಲ್ಲಿ ಕೆಲವು ಪುರಾತನ ವಸ್ತುಗಳು ದೊರೆತದ್ದರಿಂದ ಸಂಗನಕಲ್ಲಿನಲ್ಲಿ ಸಂಶೋಧನೆ ನಡೆಸಬೇಕೆಂದು ಶ್ರೀ ಸುಬ್ಬರಾಯರಿಗೆ ಅನಿಸಿತ್ತು. ಕಳೆದ ಡಿಸೆಂಬರದಲ್ಲಿ ಅವರು, ೧೦೦ ಅಡಿ ಎತ್ತರದ ಒಂದು ದಿಬ್ಬವನ್ನು ಅಗಿಯಲು ಪ್ರಾರಂಭಿಸಿದರು. ಎರಡು ಅಡಿ ಅಗಿವಷ್ಟರಲ್ಲಿ ಅವರಿಗೆ ೩ ಸಾವಿರ ವರ್ಷಗಳ ಹಿಂದಿನ ಕಲ್ಲಿನ ಕೊಡಲಿ ಮೊದಲಾದ ಉಪಕರಣಗಳಿಗೆ ಸಾಕ್ಷಿ ಹಿಡಿಯುವ ಕಾರ್ಖಾನೆ ದೊರೆಯಿತು. ಕಲ್ಲಿನ ಉಳಿ, ಕೊಡಲಿ, ಸುತ್ತಿಗೆ ಮೊದಲಾದವುಗಳೂ ಅವುಗಳನ್ನು ಮಾಡುವ ಸಾಧನಗಳೂ ಸಿಕ್ಕವು. ಮುಂದೆ ಹತ್ತು ಅಡಿ ಅಗೆವಷ್ಟರಲ್ಲಿ ಕಲ್ಲಿನ ಉಪಕರಣಗಳನ್ನು ಮಾಡಲು ಉಪಯೋಗಿಸಲ್ಪಟ್ಟ ಹರಳು ಮೊದಲಾದವು ದೊರೆತವು. ಪ್ರಾಥಮಿಕ ಪರಿಶೀಲನೆ ನಡೆಸಿದ ಮೇಲೆ ಅವುಗಳನ್ನು ಕೇಂಬ್ರಿಜ ವಿಶ್ವವಿದ್ಯಾಲಯಕ್ಕೆ ಕಳಿಸಬೇಕೆಂದು ಗೊತ್ತಾಗಿ ಹಾಗೆ ಕಳಿಸಿ ಈಗ ಅಲ್ಲಿಯ ತಜ್ಞರ ಅಭಿಪ್ರಾಯಗಳನ್ನು ನಿರೀಕ್ಷಿಸಲಾಗಿದೆ.

# ಧರ್ಮವಿರೋಧಕ ಧೋರಣದ ನಿಷೇಧ

## ಧಾರವಾಡ ವಿದ್ವಾಂಸರ ಮತ್ತು ಸದ್ಗೃಹಸ್ಥರ ಸಭೆ

ಧಾರವಾಡದಲ್ಲಿ ೧೩ ರಂದು ಶಾಸ್ತ್ರೀಕ ಮಧ್ವಸಿದ್ಧಾಂತೋತ್ತೇಜಕ ಸಭೆಯು ಪರವಾಗಿ ವಿದ್ವಾಂಸರ ಮತ್ತು ನಾಗರಿಕರ ಸಭೆ ಶ್ರೀ ಗಲಗಲಿ ಕೂರ್ಮಾಚಾರ್ಯರ ಅಧ್ಯಕ್ಷತೆಯಲ್ಲಿ ಸೇರಿ ಕೆಳಗಿನ ಆಶಯದ ಗೊತ್ತುವಳಿ ಸ್ವೀಕೃತವಾದವು.

೧) ಧಾರ್ಮಿಕ ಸಂಸ್ಥೆಗಳ ಬಗ್ಗೆ ಧರ್ಮಶಾಸ್ತ್ರಕ್ಕಾಗಿ ನಿರ್ಧರಿಸಿದ ಧರ್ಮವಿಧಿಗಳ ವಿರುದ್ಧವಾಗಿ ಸರಕಾರವು ಸ್ವೀಕರಿಸಬೇಕೆಂದಿರುವ ಧೋರಣವು ಧಾರ್ಮಿಕ ಕ್ಷೇತ್ರದಲ್ಲಿ ಸರಕಾರ ಕೈಹಾಕುವಂಥದು ಅನರ್ಥಕಾರಿಯು ಆಗಿದೆ. ಆದುದರಿಂದ ಇಂತಹ ಧೋರಣವನ್ನು ಈ ಸಭೆಯು ನಿಷೇಧಿಸುತ್ತದೆ. ಮತ್ತು ತನ್ನ ಪ್ರತಿನಿಧಿಯನ್ನು ಕಳಿಸಿ ಈ ವಿಷಯವನ್ನು ಸಮರ್ಥಿಸಲು ಸಿದ್ಧವಿದೆ.

೨) ಡಾ. ಅಂಬೇಡಕರರು ಮಧ್ಯವರ್ತಿ ಶಿರಿಯೋಲಗದಲ್ಲಿ ಹಿಂದೂ ಕಾಯಿದೆಗೆ ತಂದ ತಿದ್ದುಪಡಿಯು ಹಿಂದೂಧರ್ಮದ ತಳಹದಿಯನ್ನೇ ಕಿತ್ತಿ ಒಗೆಯುವಂಥವಿರುವದರಿಂದ ಈ ಸಭೆ ಅದನ್ನು ತೀವ್ರವಾಗಿ ನಿಷೇಧಿಸುತ್ತದೆ. ಇಂತಹ ಕಾಯಿದೆ ರಾಷ್ಟ್ರದಲ್ಲಿ ಅಸಂತೋಷವನ್ನುಂಟುಮಾಡುತ್ತದೆಂದು ಸರಕಾರಕ್ಕೆ ತಿಳಿಸಲು ಅಪೇಕ್ಷಿಸುತ್ತದೆ. ಸರಕಾರವು ಧಾರ್ಮಿಕ ಕಾರ್ಯದಲ್ಲಿ ಕೈಹಾಕಬಾರದೆಂದೂ ಸರಕಾರ ಕೊಟ್ಟ ವಚನಕ್ಕೆ ಇದು ವಿರೋಧಕವಾಗಿದೆಂದೂ ಈ ಸಭೆಯು ಸಾರುತ್ತದೆ.

ಮುದ್ರಾಸದ ವಾದಿರಾಜ ವಿದ್ವತ್ಸಭೆಯು ಸರ್ವಸಮ್ಮತವಾಗಿಯೂ ಸಕ್ರಮವಾಗಿಯೂ ನಡೆದ ಇತ್ತೀಚಿನ ಉತ್ತರಾದಿಮಠದ ಸಂನ್ಯಾಸಾಶ್ರಮದ ವಿಧಾನ ವಿಷಯದಲ್ಲಿ ಪೂರ್ಣ ಸಂಗತಿಗಳನು ತಿಳಿದುಕೊಳ್ಳದೆ ಸರ್ವಜ್ಞಾಚಾರ್ಯರ ಪರಂಪರೆಯಲ್ಲಿ ಬಂದ ಶ್ರೀ ಉತ್ತರಾದಿಮಠದಂತಹ ಈ ಧಾರ್ಮಿಕ ಸಂಸ್ಥೆಯ ವಿಷಯದಲ್ಲಿ ಜನರನು ಸಂಶಯದಲ್ಲಿ ಕೆಡಹುವಂಥ ನಿರ್ಣಯ ಕೈಕೊಂಡದ್ದು ಅಧಿಕಾರ ಬಾಹ್ಯವಿದ್ದದಲ್ಲದೆ ಅತ್ಯಂತ ಧಾರ್ಷ್ಟ್ಯವೂ ವಿಷಾದಕರವೂ ಧರ್ಮದ್ರೋಹವೂ ಇರುವದೆಂದು ಈ ಸಭೆಯು ಸಾರುತ್ತದೆ.

# ಶ್ರೀ ಉತ್ತರಾದಿಮಠದ ಶ್ರೀಗಳ ಸಂನ್ಯಾಸಾಶ್ರಮ ಸ್ವೀಕಾರ

ಪತ್ರಿಕೆಗಳಲ್ಲಿ ಪ್ರಕಟವಾದ ಸುದಿಗಳಿಂದ ಜನರಲ್ಲಿ ಅನೇಕ ತಪ್ಪುಕಲ್ಪನೆಗಳು ಹಬ್ಬಿ ಕೆಲವರಿಂದ ಪತ್ರಗಳು ಬಂದಿರುವವೆಂದು ಆಶ್ರಮಕಾಲಕ್ಕೆ ಪ್ರತ್ಯಕ್ಷವಾಗಿ ಅಲ್ಲಿಯೆ ಇದ್ದ ಶ್ರೀ ನರಸಿಂಹಾಚಾರ್ಯ ಪರಬೇಡಿ, ಗೋಪಾಲಾಚಾರ್ಯ ಮಹಿಷಿ ಮೊದಲಾದ ೮ ಜನ ವಿದ್ವಾಂಸರು ಮತ್ತು ನಾಗರಿಕರು ಕೆಳಗಿನ ಆಶಯದ ಪ್ರಕಟನೆಯನ್ನು ಹೊರಡಿಸಿದ್ದಾರೆ.

ಶ್ರೀಮದುತ್ತರಾದಿಮಠದ ಶ್ರೀ ಸತ್ಯಾಭಿಜ್ಞತೀರ್ಥರು ೨-೨-೪೮ ನೇ ಸೋಮವಾರ ಪ್ರಾತಃಕಾಲಕ್ಕೆ ೪॥ ಗಂಟೆಯ ಸುಮಾರಿಗೆ ಪಂಡಿತ ಗುತ್ತಲ ಗುರುರಾಜಾಚಾರ್ಯರನ್ನು ಮಠದ ಉತ್ತರಾಧಿಕಾರಿಗಳನ್ನಾಗಿ ಮಾಡುವೆವೆಂದು ಅನೇಕ ಲೌಕಿಕ ವೈದಿಕರ ಸಮಕ್ಷದಲ್ಲಿ ಉದ್ಘೋಷಿಸಿದರು. ಅನಂತರ ಪಂಡಿತ ಗುರುರಾಜಾಚಾರ್ಯರು ಎಲ್ಲ ವಿದ್ವಾಂಸರಿಂದ ಆಶೀರ್ವಾದಪಡೆದು ಮಧ್ಯಾಹ್ನ ಸಂನ್ಯಾಸಾಶ್ರಮಕ್ಕೆ ಪೂರ್ವಾಂಗಭೂತವಾದ ಕಾರ್ಯಕಲಾಪಗಳನ್ನು ಸಶಾಸ್ತ್ರವಾಗಿ ಜರುಗಿಸಿ ವೈದಿಕ ಸ್ನಾತ್ರಮದಿಂದ ರಾತ್ರಿಯನ್ನು ಕಳೆದು ಮಂಗಳವಾರ ಸಂನ್ಯಾಸಾಶ್ರಮವನ್ನು ವಿಧಿಪೂರ್ವಕ ಸ್ವೀಕರಿಸಿ ಶ್ರೀ ರಾಮದೇವರ ಪೂಜಾದಿಗಳನ್ನು ಪ್ರಾರಂಭಿಸಿದರು. ಹೀಗೆ ಎಲ್ಲ ಪ್ರತಿಷ್ಠಿತ ನಾಗರಿಕರು ಹಾಗು ವಿದ್ವಜ್ಜನರ ಎದುರಿನಲ್ಲಿ ಆಶ್ರಮ ಸ್ವೀಕಾರ ಸಮಾರಂಭ ಸಶಾಸ್ತ್ರವಾಗಿ ನಡೆಯಿತು.

"ಹರಿಜನ" ಅಗ್ರಲೇಖ

# ಸಾಧನ ಶುದ್ಧಿಯ ಹಟ

ಸೇವಾಗ್ರಾಮ ಸಮ್ಮೇಲನದಲ್ಲಿ ಶ್ರೀ ವಿನೋಬಾ ಭಾವೆಯವರು ಅನೇಕ ವಿಚಾರ ಪ್ರಚೋದಕ ಭಾಷಣಗಳನ್ನು ಮಾಡಿದರು. ಅವುಗಳ ಸಾರವನ್ನು ಮುಂದೆ ಯಾವಾಗಲೂ "ಹರಿಜನ"ದಲ್ಲಿ ಸಂಗ್ರಹಿಸಿ ಕೊಡಬೇಕೆಂದಿದ್ದೇನೆ. ಈ ಲೇಖದಲ್ಲಿ ಅವರು ಅನೇಕಬಾರಿ ಒತ್ತಿ ಹೇಳಿದ ಒಂದು ವಿಷಯವನ್ನು ಮಾತ್ರ ವಿವೇಚಿಸುವೆ. ಧ್ಯೇಯ-ಭೇದ, ಜಾತಿಭೇದಗಳೆಷ್ಟೇ ಇದ್ದರೂ—ಯಾವುದಾದರೊಂದು ಧ್ಯೇಯವನ್ನು ಕೈಗೂಡಿಸಲು ಉಪಯೋಗಿಸುವ ಸಾಧನ ಪರಿಶುದ್ಧವಾಗಿರಬೇಕು, ಅವರಲ್ಲಿಯೂ ತನ್ನ ಧ್ಯೇಯ ಉಚ್ಚವೂ ಉದಾತ್ತವೂ ಆಗಿದೆಯೆಂಬ ನಂಬಿಕೆಯುಳ್ಳವನ ಸಾಧನಗಳು ಇನ್ನಷ್ಟು ಶುದ್ಧವಾಗಿರಬೇಕು, ಎಂಬೀ ಒಂದು ವಿಷಯದಲ್ಲಾದರೂ ಎಲ್ಲರೂ ಏಕಾಭಿಪ್ರಾಯ ಪಡುವದು ಸಾಧ್ಯವಿಲ್ಲವೇ ಎಂದು ಅವರು ಸದಸ್ಯರನ್ನು ಕೇಳಿದರು. ಉದ್ದೇಶವೆಷ್ಟೇ ಘನವಾಗಿರಲಿ, ಅದನ್ನು ಕೈಗೂಡಿಸಲು ಹಿಂಸೆಯನ್ನುಪಯೋಗಿಸಿದರೆ ಅದು ಜನರನ್ನು ಸರ್ವನಾಶಕ್ಕೆಳೆಯದಿರದು. ಕನಿಷ್ಠಪಕ್ಷ, ಗಾಂಧೀಜಿಯೊಡನೆ ಒಂದು ಬಗೆಯ ಸಮಾನಾಭಿಪ್ರಾಯವನ್ನು ಹೊಂದಿದವರಾದರೂ ತಮ್ಮ ವಿಶಿಷ್ಟ ಸಂಸ್ಥೆಗಳ ನಡೆವಳಿಯಲ್ಲಿ ಸರಿಯಾದ ಸಾಧನಗಳನ್ನೇ ಉಪಯೋಗಿಸಬೇಕೆಂದು ಹಟ ಹಿಡಿಯಬೇಕು.

ಒಳಿತು ಕೆಡುಕೆಂದಿವು ಯಾವದಾದರೊಂದು ಸಂಸ್ಥೆಗೆ ಮೀಸಲಾಗಿಲ್ಲವೆಂದು ಶ್ರೀ ವಿನೋಬಾ ಅವರು ಹೇಳಿದ್ದು ಸರಿಯೆ. ಪ್ರತಿಯೊಂದು ಧ್ಯೇಯದ ಪಕ್ಷಪಾತಿಗಳಲ್ಲಿಯೂ ಒಳಿತು ಕೆಡುಕುಗಳೆರಡೂ ಇವೆ. ಇದೊಂದು ಭಾಗದಲ್ಲಿ ಅವರೆಲ್ಲರೂ ಒಂದೇ ಬಗೆಯವರಾಗಿದ್ದಾರೆ. ಅವುಗಳಲ್ಲಿ ಪ್ರತಿಯೊಂದರಿಂದಲೂ ಒಳಿತಾದುದನ್ನು ತೆಗೆದುಕೊಂಡು ಕೆಟ್ಟದ್ದನ್ನು ಬಿಡುವ ಮೂಲಕ ಜಗತ್ತು ಲಾಭಪಡೆಯುವದು ಅವಶ್ಯ. ಆದರೆ ಇದು ಸಾಧ್ಯವಾಗಬೇಕಾದರೆ ಪ್ರತಿಯೊಂದು ಸಂಸ್ಥೆಯೂ ತನ್ನ ಧ್ಯೇಯ-ಸಾಧನೆಗೆ ಉಪಯೋಗಿಸುವ ಉಪಾಯಗಳಲ್ಲಿ ಅಸತ್ಯಕ್ಕೂ ಹಿಂಸೆಗೂ ಬಹಿಷ್ಕಾರ ಹಾಕಬೇಕು. ಹಿಂದೆ, ಜನರು ನಿಜವಾಗಿ ದಯಾಮಯ ಉದ್ದೇಶಗಳಿಂದಲೇ ಆಯುಧ ಗ್ರಹಣ ಮಾಡಿರಬಹುದು ಆದರೆ ಎಷ್ಟೇ ಘನವಾದ ಧ್ಯೇಯಕ್ಕಾಗಿ ಕತ್ತಿ ಹಿರಿಯುವುದು ನಿರರ್ಥಕವೆಂದು ಈಗ ನಾವು ಮನಗಂಡಿದ್ದೇವೆ. ಈ ವಿಜ್ಞಾನದ ಕಾಲದಲ್ಲಿ ಶಸ್ತ್ರಾಸ್ತ್ರಗಳ ವೈವಿಧ್ಯಕ್ಕೆ ಇತಿಮಿತಿಯೇ ಇಲ್ಲದಂತಾಗಿಬಿಟ್ಟಿದೆ. ಆದುದರಿಂದ ಹಿಂಸೆಯನ್ನು ಸರ್ವಥಾ ಪರಿತ್ಯಜಿಸಿ ಅಹಿಂಸೆಯನ್ನು ಅಂಗೀಕರಿಸುವದು ಅಪರಿಹಾರ್ಯವಾಗಿದೆ. ಯಾವುದೇ ಸಂಸ್ಥೆಗಾದರೂ ಬೇರೆ ಉಪಾಯವೇ ಇಲ್ಲದೆ ಹಿಂಸೋಪಾಯವನ್ನು ಸ್ವೀಕರಿಸಬೇಕಾಗಬಹುದೆಂಬದನ್ನು ವಿನೋಬಾ ಅವರು ಒಪ್ಪಲಿಲ್ಲ. ತದ್ವಿರುದ್ಧವಾಗಿ, ವಿವೇಕಿ ಜನರು ಕೂಡಿದರೆ ಹಿಂಸೆಯ ಅವಶ್ಯಕತೆಯುಂಟಾಗದು ಹೊರತು ಹೆಚ್ಚಲಿಕ್ಕಿಲ್ಲ. ಆದರೆ ಸ್ವಪ್ರತಿಷ್ಠೆಯನ್ನು ಕಾಯ್ದುಕೊಳ್ಳುವ ಸಲುವಾಗಿ ಬಾಹ್ಯ ಬಲಪ್ರಯೋಗದಿಂದ ವಿಧೇಯತೆಯನ್ನು ದೊರಕಿಸಿಕೊಳ್ಳಬಯಸುವ ಅಧಿಕಾರ ತೃಷ್ಣೆಯೊಡನೆಯೆ ಹಿಂಸೆಯೂ ಹುಟ್ಟಿತು.

ಮುಂದೆ ಒಂದೆಡೆಯಲ್ಲಿ, ಶ್ರೀ. ವಿನೋಬಾ ಅವರು ಆರ್. ಎಸ್. ಎಸ್. ಮತ್ತು ಅದು ಉಂಟುಮಾಡಿದ ಕೀಟಲೆಯನ್ನು ಪ್ರಸ್ತಾವಿಸಿದರು. ಮಹಾರಾಷ್ಟ್ರದಲ್ಲಿ ಜನ್ಮತಾಳಿದ ಈ ಚಳವಳಿಯು ಒಂದು ತತ್ವಜ್ಞಾನದ ರೂಪವನ್ನೆ ತಳೆದುಬಿಟ್ಟಿದೆ. ಬೇರೆ ಬೇರೆ ವಿಚಾರವೃಂದಗಳಲ್ಲಿ ಬೇರೆ ಬೇರೆ ತತ್ವಜ್ಞಾನಗಳು ಉಗಮಿಸುವದು ಅಪರಿಹಾರ್ಯಪ್ರಾಯವೇ ಸರಿ. ಆದರೆ ಅವರೆಲ್ಲರೂ ಯೋಗ್ಯವಾದ ಸಾಧನಗಳಲ್ಲದೆ ಅನ್ಯೋಪಾಯಗಳಿಗೆ ಕೈಹಾಕುವದಿಲ್ಲೆಂಬ ಹಟ ತೊಡಬಹುದಾದರೆ ಒಂದು ಬಗೆಯ ನೈತಿಕ ವ್ಯೂಹವೇ ರಚಿಸಲ್ಪಟ್ಟಂತಾಗಿ ಜನರ ಮೇಲೆ ಒಳ್ಳೆಯ ಪರಿಣಾಮವಾದೀತು. ಸತ್ಯ ಅಹಿಂಸೆಗಳ ಶಪಥ ತೊಟ್ಟಂಥವನು ಯಾವುದೇ ಕ್ಷೇತ್ರದಲ್ಲಿ ದುಡಿಯುತ್ತಿರಲಿ, ಅವನು ದೇಶಕ್ಕೊಂದು ಶಕ್ತಿಯನ್ನು ಒದಗಿಸಿಯೇ ತೀರುವ. ಸಾಧನದ ಪಾವಿತ್ರ್ಯವನ್ನು ಕಾಯ್ದುಕೊಳ್ಳಬೇಕೆಂದು ಗಾಂಧೀಜಿ ಯಾವಾಗಲೂ ನಮ್ಮನ್ನು ಎಚ್ಚರಿಸುತ್ತಿದ್ದರು. ಆದರೆ ಅವರ ಸೂಚನೆಗೆ ನಾವು ಕಿವಿಗೊಡಲಿಲ್ಲ. ಗೋಡೆ ಕಟ್ಟುವ ಕೆಲಸದಲ್ಲಿ ಒಂದು ಸಿದ್ಧಾಂತವಿದೆ — ಗೋಡೆ ನೆಲ್ಕಂಬದಲ್ಲಿ ಸಮಕೋನದಲ್ಲಿ ಬೇಕೆಂದು. ನಿಜವಾಗಿ ಗೋಡೆ ಕಟ್ಟುವಾಗ, ನಾವೆಷ್ಟೇ ಎಚ್ಚರಿಕೆ ವಹಿಸಿದರೂ ಎಷ್ಟೋ ವೇಳೆ ಈ ನಿಯಮಕ್ಕೆ ವ್ಯತ್ಯಯ ಬಂದೀತು. ಗೋಡೆ ಸಮಕೋನದಲ್ಲಿಟ್ಟು ಸ್ವಲ್ಪ ಅತ್ತಿತ್ತ ವಾಗಿದರೆ ಅಡ್ಡಿಯಿಲ್ಲವೆಂದು ಯಾವ ಮೇಸ್ತ್ರಿಯೂ ಹೇಳಲಾರ. ಹಾಗೆಯೆ ತತ್ಕಾಲದ ಒತ್ತಾಯಕ್ಕೆ ಸರಿಹೋಗುವಂತೆ ಸತ್ಯ ಅಹಿಂಸೆಗಳನ್ನು ಅಲ್ಪ ಸ್ವಲ್ಪ ತಗ್ಗಿಸಿದರೆ ದೋಷವಿಲ್ಲವೆಂದು ಯಾರೂ ಹೇಳಲಾರರು. ಯಾವ ಸಂದರ್ಭದಲ್ಲಿಯೂ ಸತ್ಯ ಅಹಿಂಸೆಗಳೇ ಬೇಕೆಂಬ ಹಟವಿರಬೇಕು.

ಅದೇ ಸಭೆಯಲ್ಲಿ ಮಾತಾಡಿದ ಜಯಪ್ರಕಾಶ ನಾರಾಯಣರಾದರೂ ಒಂದು ಸಂದರ್ಭದಲ್ಲಿ, ಸಾಧ್ಯಸಾಧನ ಸಂಬಂಧದಲ್ಲಿ ಹಿಂದೆ ತಮ್ಮ ಅಭಿಪ್ರಾಯ ಏನೇ ಇದ್ದಿರಲಿ ಈಗ ನಿರ್ದುಷ್ಟ ಸಾಧನಗಳ ಉಪಯೋಗ ಅತ್ಯವಶ್ಯವೆಂದು ತಮಗೆ ಹೆಚ್ಚು ಹೆಚ್ಚು ಮನವರಿಕೆಯಾಗುತಿದೆಯೆಂದು ಒಪ್ಪಿಕೊಂಡರು. ಸೇವಾಗ್ರಾಮ ಸಮ್ಮೇಲನದ ಸ್ವಲ್ಪ ಕಾಲಾನಂತರ ನಾಸಿಕದಲ್ಲಿ ಸೇರಿದ ಸಾಮ್ಯವಾದಿ ಸಮ್ಮೇಲನದಲ್ಲಿಯೂ ಶ್ರೀ. ಜಯಪ್ರಕಾಶರು ಈ ಮಾತನ್ನೇ ಪುನಃ ಹೇಳಿದರಂತೆ. ಸೇವಾಗ್ರಾಮ ಸಮ್ಮೇಲನದಲ್ಲಿ ಪಂ. ಜವಾಹರಲಾಲರ ಭಾಷಣವಾದರೂ ಅದೇ ಮಾದರಿಯದಾಗಿತ್ತು. ಅಮೇರಿಕೆಯ ಚಿಕಾಗೋ ವಿಶ್ವವಿದ್ಯಾಲಯದ ದುಂಡು ಮೇಜಿನ ಕಾರ್ಯಕ್ರಮದ ಅಂಗವಾಗಿ ಅವರು ಮಾಡಿದ ಆಕಾಶವಾಣಿ ಭಾಷಣವಾದರೂ ಅಂಥವೇ ವಿಚಾರಗಳನ್ನು ವ್ಯಕ್ತಪಡಿಸಿದೆ. ಆ ಭಾಷಣ ಆಮೂಲಾಗ್ರ ಓದಲು ಯೋಗ್ಯವಾಗಿದೆ. ಪರಸ್ಪರ ಸಂಬಂಧಿಸಿದ್ದರೂ ಬೇರೆ ಬೇರೆ ಧ್ಯೇಯಗಳಿಗೆ ಅಳವಟ್ಟ ಮೂರು ಸಂಸ್ಥೆಗಳ ನಾಯಕರಾದ ಪಂ. ಜವಾಹರಲಾಲ, ಶ್ರೀ. ಜಯಪ್ರಕಾಶ ನಾರಾಯಣ ಹಾಗು ಶ್ರೀ ವಿನೋಬಾ ಅವರು ಈ ಅತಿ ಮುಖ್ಯ ವ್ಯವಹಾರಿಕ ವಿಷಯದಲ್ಲಿ ಒಮ್ಮತರಾಗಿರುವದು ಸುಲಕ್ಷಣವೆನ್ನಬೇಕು. ಜನರು ಸುಖವಾಗಿರಬೇಕಾದರೆ ಈ ತತ್ವಕ್ಕೆ ನಿಷ್ಠರಾಗಿ ಉಳಿಯುವದು ಅತ್ಯವಶ್ಯ.

"ಯುದ್ಧವಿಜ್ಞಾನ ನಮ್ಮನ್ನು ಶುದ್ಧ ಸರ್ವಾಧಿಕಾರಕ್ಕೆ ಎಳೆದೊಯ್ಯುತ್ತದೆ. ಅಹಿಂಸಾ ವಿಜ್ಞಾನವೇ ನಮ್ಮನ್ನು ಶುದ್ಧ ಪ್ರಜಾತಂತ್ರಕ್ಕೆ ಕರೆದೊಯ್ಯಬಲ್ಲದು" ಎಂದು ಗಾಂಧೀಜಿ ೧೫—೧೦—೪೬ರ "ಹರಿಜನ"ದಲ್ಲಿ ಬರೆದಿದ್ದರು. ಮತ್ತೊಮ್ಮೆ, ಆ ಮರೆಯಲಾರದ ೧೯೪೨ರ ಅಗಸ್ಟ ೮ಕ್ಕೆ ಅವರು ಅ. ಭಾ. ಕಾಂಗ್ರೆಸ್ಸಿನ ಸದಸ್ಯರನ್ನು ಕುರಿತು ಹೇಳಿದ್ದು, "ನಿಜವಾದ ಪ್ರಜಾತಂತ್ರ ಅಹಿಂಸೆಯಿಂದ ಮಾತ್ರ ಉದ್ಭವಿಸಬಲ್ಲದೆಂದು ನನ್ನ ನಂಬಿಕೆ. ಜಾಗತಿಕ ರಾಜ್ಯ ಸಂಘದ ಕಟ್ಟಡವನ್ನು ಅಹಿಂಸೆಯ ನೆಲಕಟ್ಟಿನ ಮೇಲೆ ಮಾತ್ರ ನಿರ್ಮಿಸುವದು ಸಾಧ್ಯ. ಜಾಗತಿಕ ಸಂಬಂಧದಲ್ಲಿ ಹಿಂಸೆಯನ್ನು ಸರ್ವಥಾ ತ್ಯಾಜ್ಯವಾಗಿ ಮಾಡಬೇಕಾಗುವದು"

ವರ್ಧಾ ೭—೪—೪೮

—ಕಿ ಘ. ಮಶ್ರುವಾಲಾ

---

## ಟಿಪ್ಪಣಿಗಳು

### ಗಾಂಧೀ ಸ್ಮಾರಕ ನಿಧಿ ಪಾವತಿಗಳು

ಈ ಪಾವತಿಗಳು ಇಂಗ್ಲೀಶಿನಲ್ಲಿ ಮುದ್ರಿತವಾಗಿವೆಂಬದಾಗಿ ತಕರಾರು ಬಂದಿದೆ. ಅದು ನ್ಯಾಯ್ಯವೇ ಆಗಿದೆಂದು ನನಗನಿಸುತ್ತದೆ. ಹಳ್ಳಿಯ ಕಾರ್ಯಕರ್ತರಿಗೆ ಮತ್ತು ದಾತೃಗಳಿಗೆ ಇದು ತಿಳಿಯಲಾರದು. ಪರಾಹತು ಸ್ವರಾಜ್ಯ ಸಿಕ್ಕು ಒಂದು ತಿಂಗಳೊಳಗಾಗಿಯೇ ಅಂದರೆ ೧೧—೯—೧೯೪೭ ನೇ ದಿನ ಹೊಸದಿಲ್ಲಿಯಿಂದ ಗಾಂಧೀಜಿ ಹೀಗೆ ಬರೆದರು.

"ಸರಕಾರದವರು ಮತ್ತು ಅವರ ಅಧಿಕಾರಿ ವರ್ಗದವರು ಪ್ರಯತ್ನ ಮಾಡದಿದ್ದರೆ ಇಂಗ್ಲಿಶ ಭಾಷೆಯು ಹಿಂದುಸ್ತಾನಿಯ ಸ್ಥಾನವನ್ನು ಆಕ್ರಮಿಸಿ ಬಿಡುವದು. ಇಂಗ್ಲಿಶವನ್ನು ಎಂದೂ ತಿಳಿಯದಿದ್ದಂಥ ಕೋಟ್ಯವಧಿ ಭಾರತೀಯರಿಗೆ ಇದರಿಂದ ನಿಶ್ಚಯವಾಗಿ ಹಾನಿಯಾಗುವದು. ಪ್ರಾಂತೀಯ ಮತ್ತು ಅಂತರ್ ಪ್ರಾಂತೀಯ ಭಾಷೆಗಳಲ್ಲಿ ಎಲ್ಲ ವ್ಯವಹಾರವನ್ನು ಸಾಗಿಸುವಂಥ ಸಿಬ್ಬಂದಿಯನ್ನಿಟ್ಟುಕೊಳ್ಳುವದು ನಿಶ್ಚಯವಾಗಿ ಸರಕಾರಕ್ಕೇನು ಕಠಿನವಲ್ಲ. ಈ ಅಂತರ್ ಪ್ರಾಂತೀಯ ಭಾಷೆಯೆಂದರೆ ನಾಗರಿ ಇಲ್ಲವೆ ಉರ್ದು ಲಿಪಿಯಲ್ಲಿ ಬರೆದ ಹಿಂದುಸ್ತಾನಿಯೇ ಎಂದು ನನ್ನ ಅಭಿಪ್ರಾಯ.

ಅವಶ್ಯಕವಾದ ಈ ಬದಲಾವಣೆ ಮಾಡುವದರಲ್ಲಿ ದಿನಗಳೆಯುವದೆಂದರೆ ರಾಷ್ಟ್ರಕ್ಕೆ ಅಷ್ಟೊಂದು ಸಾಂಸ್ಕೃತಿಕ ಹಾನಿಯನ್ನೆಸಗಿದಂತೆಯೇ ಸೈ.

(ಹರಿಜನ ೨೧ ಸಪ್ಟೆಂಬರ ೧೯೪೭)

ಪ್ರಾಂತೀಯ ಕಾರ್ಯಕರ್ತರಿಗೆ ಹಿಂದೀ ಭಾಷೆಗಳಲ್ಲಿನಕ್ಕಿಂತ ಇಂಗ್ಲಿಶ ಭಾಷೆಯಲ್ಲಿ ವ್ಯವಹಾರ ನಡೆಸುವದು ಕಠಿನವೆಂದು ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿ ಸಮಿತಿಯವರಿಗೆ ಗೊತ್ತಿದ್ದರೂ ಅವರೇ ಇದನ್ನು ಮಾಡದಿದ್ದರೆ ಸರಕಾರವು ಸದ್ಯದ ಅದರ ಸಿಬ್ಬಂದಿ ವರ್ಗವು ಪ್ರಗತಿಪರ ಧೋರಣ ವಹಿಸದಿದ್ದುದು ಮತ್ತು ಜನತೆಯ ಅನುಕೂಲತೆಗಳನ್ನು ಲಕ್ಷಿಸದೆ ತನ್ನ ಸ್ವಂತ ಅನುಕೂಲತೆಗಳತ್ತ ಗಮನಿಸುತಿರುವದು ಕ್ಷಮ್ಯವೆ ಎಂದು ಹೇಳಬಹುದು. ಗಾಂಧೀಜಿ ಅಪಾಯಕಾರಕ ಮತ್ತು ದೇಶಾಭಿಮಾನವಿರಹಿತ ಎಂದು ಯಾವುದನ್ನು ಕರೆಯುತ್ತಿದ್ದರೋ ಅಂಥ ಮಾಧ್ಯಮದನ್ನೇ ಉಪಯೋಗಿಸಿ ನಿಧಿ ಸಮಿತಿಯವರು, ಆಚಾರ್ಯ ಕೃಪಲಾನಿಯವರು ಉದ್ದಿಮೆದಾರರ ಮೇಲೆ ಹೊರಿಸಿದ ತಪ್ಪನ್ನೇ ತಿಳಿದೊ ತಿಳಿಯದಲೊ ಮಾಡಿರುವರು. ಆ ಸಮಿತಿಯ ಕಚೇರಿಯವರು ಈ ತಪ್ಪನ್ನು ತಿದ್ದುವ ಉಪಾಯಗಳನ್ನು ಬೇಗ ಕೈಕೊಳ್ಳುವರೆಂದು ನಾನು ಆಶಿಸುತ್ತೇನೆ.

ವರ್ಧಾ — ಕಿ. ಘ. ಮ.

೪—೪—೧೯೪೮

### ಗ್ರಾಮ ಕಾರ್ಯಕರ್ತರ ಶಿಕ್ಷಣ ವರ್ಗ

ಗ್ವಾಲೇರದಲ್ಲಿಯ ಪೊಹರಿ ಗ್ರಾಮ ಕಾರ್ಯಕರ್ತರ ಶಿಕ್ಷಣ ಸಂಸ್ಥೆಯ ಮುಖ್ಯಾಧ್ಯಾಪಕರು ೧೯೪೮ನೇ ಮೇ ಒಂದರಿಂದ ಸಂಸ್ಥೆಯ ಹೊಸ ವರ್ಗಗಳು ಪ್ರಾರಂಭವಾಗುವವೆಂದು ಸಾರಿದ್ದಾರೆ. ಶಿಕ್ಷಣದ ಅವಧಿ ಒಂದು ವರುಷ. ವಿಶ್ವವಿದ್ಯಾನಿಲಯದ ಪದವೀಧರರಷ್ಟು ಶಿಕ್ಷಣ ಮಟ್ಟವನ್ನು ಮತ್ತು ಯೋಗ್ಯತೆಯನ್ನು ಪಡೆದವರಾಗಿರಬೇಕು ಉಮೇದ್ವಾರರು. ಮುಖ್ಯಾಧ್ಯಾಪಕರಿಗೆ ಬರೆದುಕೊಂಡು ಹೆಚ್ಚಿನ ವಿವರಗಳನ್ನು ತಿಳಿದುಕೊಳ್ಳಬಹುದು.

ವರ್ಧಾ — ಕಿ. ಘ. ಮ.

೬—೪—೧೯೪೮

### ಹರಿಜನರಿಗಾಗಿ ಮಂದಿರ ಮುಕ್ತದ್ವಾರ

ಉನಾ (ಹೊಶಿಯಾಪುರ) ತಹಸೀಲಿನ ಬಸದೆರಾ ಹಳ್ಳಿಯಲ್ಲಿ ತಮ್ಮ ಮಂದಿರವನ್ನು ಇದೇ ೨೫ ಫೆಬ್ರುಅರಿಯಿಂದ ಹರಿಜನರಿಗೆ ಮುಕ್ತದ್ವಾರ ಮಾಡಿದ್ದಾಗಿಯೂ ಅದೇ ಸ್ಥಳದಲ್ಲಿ ಹೆಣ್ಣು ಹುಡಿಗೆಯರ ಶಾಲೆಯೊಂದನ್ನು ತೆಗೆದಿರುವದಾಗಿಯೂ ಪಂಡಿತ ನರಸಿಂಗದಾಸ ಇವರು ತಿಳಿಸುತ್ತಾರೆ.

ವರ್ಧಾ — ಕಿ. ಘ. ಮ.

೪—೪—೧೯೪೮

### ಡಾ. ಕರ್ವೆ ದೀರ್ಘಾಯುಗಳಾಗಲಿ

ಸರ್ವೋದಯ ಸಮಾಜದ ವಿಧಾಯಕ ಕಾರ್ಯಕ್ರಮದ ಗೊತ್ತುವಳಿಯಲ್ಲಿ 'ಗಂಡಸರಗೂ ಹೆಂಗಸರಿಗೂ ಸಾಮಾನ್ಯ ಹಕ್ಕುಬಾಧ್ಯತೆ ಮತ್ತು ಸ್ಥಾನಮಾನವನ್ನು ಸಂಪಾದಿಸುವ ವಿಷಯವನ್ನು ಪ್ರಾಮುಖ್ಯತೆಯಿಂದ ಉಲ್ಲೇಖಿಸಲಾಗಿದೆ. ಈ ವಿಷಯದಲ್ಲಿ ಡಾ. ಡಿ. ಕೆ. ಕರ್ವೆಯವರು ಜೀವನವನ್ನೇ ಮುಡಿಪಾಗಿಟ್ಟು ಮಾಡಿದ ಕಾರ್ಯವನ್ನು ಅದೆಂತು ಮರೆಯುವದು? ೧೯೪೮ನೆಯ ಇಸ್ವಿಯ ಎಪ್ರಿಲ ೧೮ಕ್ಕೆ ಅವರಿಗೆ ೯೦ ವರುಷ ತುಂಬಿದವು. ಅವರ ಅರವತ್ತನೇ, ಎಪ್ಪತ್ತನೇ, ಮತ್ತು ಎಂಬತ್ತನೇ ವರುಷದ ಜಯಂತ್ಯುತ್ಸವಗಳು ಒಳ್ಳೆ ಸಂಭ್ರಮದಿಂದ ಸಂಸ್ಥೆಯ ಪರವಾಗಿ ಆಚರಿಸಲ್ಪಟ್ಟವು. ಮತ್ತು ಕಳೆದ ಮೂವತ್ತು ವರ್ಷಗಳಿಂದ ಪ್ರತಿ ವರುಷ ಹಿಂಗಣೆಯಲ್ಲಿ ಸಣ್ಣ ಪ್ರಮಾಣದಲ್ಲಿ ಜಯಂತ್ಯುತ್ಸವ ಆಚರಿಸಲಾಗುತ್ತಿದೆಯೆಂದು ನನಗೆ ತಿಳಿದು ಬಂದಿದೆ. ಆದರೆ ಹಿಂಗಣೆ ಸ್ತ್ರೀ ಶಿಕ್ಷಣ ಸಂಸ್ಥೆಯ ಆಜೀವ ಕಾರ್ಯಕರ್ತರ ಸಭೆಯಲ್ಲಿ ಡಾ. ಕರ್ವೆಯವರಿಗೆ ನೂರು ವರುಷ ತುಂಬುವವರೆಗೆ ಸಂಸ್ಥೆಯ ಪರವಾಗಿ ಯಾವದೆ ಔಪಚಾರಿಕ ಸಾರ್ವಜನಿಕ ಸಮಾರಂಭವನ್ನು ಮಾಡತಕ್ಕದ್ದಲ್ಲ ಎಂದು ನಿರ್ಣಯಿಸಲಾಗಿದೆ.

ಈ ಭಾವೀ ಸಮಾರಂಭವು ಸಕಾಲದಲ್ಲಿ ಅತ್ಯುತ್ಸಾಹದಿಂದ ಆಚರಿಸಲ್ಪಡಲೆಂದು ನಾನು ಆಶಿಸುತ್ತೇನೆ. ಆದರೆ ಇಷ್ಟರಲ್ಲಿಯೆ ಮುಂಬಯಿಯಲ್ಲಿ ಕೇಂದ್ರ ಉತ್ಸವ ಸಮಿತಿಯು ಸ್ಥಾಪಿತವಾಗಿದ್ದು ಅದರ ಪರವಾಗಿ ಡಾ. ಕರ್ವೆಯವರ ೯೧ನೇ ಜಯಂತಿಯನ್ನು ಆಚರಿಸಬೇಕೆಂದೂ ಆ ಕಾಲಕ್ಕೆ ಅವರಿಗೆ ಹಮ್ಮಿಣಿಯನ್ನು ಸಮರ್ಪಿಸಬೇಕೆಂದೂ ಗೊತ್ತಾಗಿದೆಯೆಂದು ತಿಳಿಯುತ್ತದೆ. ಡಾ ಕರ್ವೆಯವರ ಹಿಂಗಣೆ ಸಂಸ್ಥೆಗೆ ಹಿಂದಿನ ಮತ್ತು ಇಂದಿನ ಕೊರತೆಯನ್ನು ತುಂಬಿಕೊಳ್ಳುವದಕ್ಕಾಗಿ ಮತ್ತು ಹೊಸ ಕಟ್ಟಡಕ್ಕಾಗಿ ೨೫ ಸಾವಿರ ರೂಪಾಯಿಗಳುಬೇಕೆಂದು ತಿಳಿಯುತ್ತದೆ. ಅವರ ಸಾವಿರಾರು ಭಕ್ತರು ಮತ್ತು ಹಳೆಯ ವಿದ್ಯಾರ್ಥಿಗಳು ಈ ಸಂಬಂಧದಲ್ಲಿ ತಮ್ಮ ಕರ್ತವ್ಯವನ್ನು ಮಾಡುವರೆಂದು ಆಶಿಸುತ್ತೇನೆ.

ವರ್ಧಾ — ಕಿ. ಘ. ಮ.

೬—೪—೪೮

### ವರ್ಧಾ ಮಹಿಳಾಶ್ರಮ

ವರ್ಧಾದಲ್ಲಿಯ ಮಹಿಳಾಶ್ರಮ ಸಮಿತಿಯವರು ವಿನಯ ಮಂದಿರ (ಹೆಣ್ಣು ಹುಡಿಗೆಯರ ಶಾಲೆ)ವನ್ನೊಂದನ್ನು ಬಿಟ್ಟು ಉಳಿದ ತಮ್ಮ ಎಲ್ಲ ಚಟುವಟಿಕೆಗಳನ್ನು ಬರುವ ಜೂನ ತಿಂಗಳಿಂದ ನಿಲ್ಲಿಸಿಬಿಡಬೇಕೆಂದು ನಿರ್ಧರಿಸಿದ್ದಾರೆ. ತಮ್ಮ ಮಾತೃಭಾಷೆಯಲ್ಲಿ ನಾಲ್ಕನೆಯ ವರ್ಗದವರೆಗೆ ಅಭ್ಯಾಸ ಮಾಡಿದ, ಪ್ರವೇಶದ ಕಾಲಕ್ಕೆ ೧೧ರಿಂದ ೧೫ ವರುಷ ವಯಸ್ಸಿನ ಹುಡಿಗೆಯರಿಗೆ ಐದು ವರ್ಷಗಳ ಅಭ್ಯಾಸ ಕ್ರಮವಿದು. ಶ್ರೀ. ವಿನೋಬಾಜಿಯವರ ನೇತೃತ್ವದಲ್ಲಿ ನಯೀತಾಲೀಮಿನ ಅಭ್ಯಾಸ ಕ್ರಮವನ್ನು ಗೊತ್ತುಪಡಿಸಲಾಗುವದು. ಹೆಚ್ಚಿನ ವಿವರಗಳುಬೇಕಾದವರು ಆಚಾರ್ಯ, ಮಹಿಲಾಶ್ರಮ, ವರ್ಧಾ ಈ ವಿಳಾಸಕ್ಕೆ ಬರೆದು ತಿಳಿದುಕೊಳ್ಳಬಹುದು.

ವರ್ಧಾ ೮—೪—೪೮ — ಕಿ. ಘ. ಮ.

### ಹಿಂದುಸ್ತಾನೀ—ಒಂದು ಸ್ಪಷ್ಟೀಕರಣ

ಹಿಂದುಸ್ತಾನದ ಸರಕಾರೀ ಭಾಷೆಯಾದ ಹಿಂದುಸ್ತಾನಿಯ ವ್ಯಾಖ್ಯೆ ಮತ್ತು ಅದರ ಧೋರಣದ ಸಂಬಂಧದಲ್ಲಿ ಸ್ಪಷ್ಟೀಕರಣ ಮಾಡುವದು ಅವಶ್ಯವೆನಿಸಿದೆ. ಕೆಳಗಿನ ಸೂಚನೆಗಳನ್ನು ನಾನು ಮಾಡಬಯಸುತ್ತೇನೆ.

"ಉತ್ತರ ಹಿಂದುಸ್ತಾನದ ನಗರಗಳ ಮತ್ತು ಹಳ್ಳಿಗಳಲ್ಲಿಯ ಹಿಂದೂ ಮುಸಲ್ಮಾನರು ಪರಸ್ಪರ ವ್ಯವಹಾರದಲ್ಲಿ ಬಳಸುವಂಥ ನಾಗರಿ ಇಲ್ಲವೆ ಉರ್ದು (ಪರ್ಶಿಯನ್) ಲಿಪಿಯಲ್ಲಿ ಬರೆಯಲ್ಪಡುವಂಥ ಸಾಮಾನ್ಯ ಭಾಷೆಯೆ ಹಿಂದುಸ್ತಾನಿಯೆಂದು ವ್ಯಾಖ್ಯೆ ಮಾಡಲಾಗಿದೆ. ಸಾಹಿತ್ಯದಲ್ಲಿ ಈ ಹಿಂದುಸ್ತಾನಿಯು ನಾಗರಿ ಇಲ್ಲವೆ ಉರ್ದು ಲಿಪಿಯ ಹಿಂದಿಯ ರೂಪವನ್ನು ಮತ್ತು ಪರ್ಶಿಯನ್ ಲಿಪಿಯಲ್ಲಿ ಉರ್ದು ರೂಪವನ್ನು ತಾಳುತ್ತದೆ. ಆದುದರಿಂದ ಹಿಂದುಸ್ತಾನಿಯು ಸಾಹಿತ್ಯದಲ್ಲಿ ಈ ಸರಳ ಹಿಂದೀ ಮತ್ತು ಸರಳ ಉರ್ದುವಿನ ಸಮ್ಮಿಲನವಾಗಬಲ್ಲುದು."

ಹಿಂದೀ ಮತ್ತು ಉರ್ದುವಿನ ಈ ಸಮ್ಮಿಲನವು ರಾಷ್ಟ್ರೀಯವಾಗಬೇಕಾದರೆ ಪೂರ್ವ ದಕ್ಷಿಣ ಮತ್ತು ಪಶ್ಚಿಮ ಭಾಗಗಳಲ್ಲಿರುವ ಹಿಂದೀ ಇಲ್ಲವೆ ಉರ್ದು ಅಥವಾ ಅವುಗಳ ಅಪಭ್ರಂಶ ಭಾಷೆಯು ಯಾರ ಮಾತೃಭಾಷೆಯಾಗಿಲ್ಲವೊ ಅಂಥ ಜನರಿಗೆ ಸಹಜವಾಗಿ ತಿಳಿಯುವಂತಹದಾಗಿರಲಿಕ್ಕೆಬೇಕೆಂಬದು ಸುಸ್ಪಷ್ಟವಿದೆ.

ಆದುದರಿಂದ ಆಯಾ ಪ್ರಾಂತೀಯ ಭಾಷೆಗಳಲ್ಲಿಯ ಶಬ್ದಗಳಿಗೆ ಹೋಲುವ ಹಿಂದೀ ಇಲ್ಲವೆ ಉರ್ದು ಶಬ್ದಗಳಿಗೆ ಹಿಂದುಸ್ತಾನಿಯ ಶಬ್ದಕೋಶದಲ್ಲಿ ಅವಕಾಶ ಸಿಕ್ಕತಕ್ಕದ್ದೆಂಬುದು ಸ್ಪಷ್ಟವಾಗಿದೆ. ಸಂಸ್ಕೃತ ಶಬ್ದಗಳ ಪ್ರಾಕೃತ ರೂಪಗಳೆ ಹಿಂದೀ ಭಾಷೆಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿ ಇರುವದರಿಂದ ಹಿಂದುಸ್ತಾನಿಯಲ್ಲಿಯೂ ಅವು ಸಮಾವೇಶವಾಗುವದು ಸ್ವಾಭಾವಿಕವಾಗಿದೆ. ಅರಬ್ಬೀ ಮತ್ತು ಫಾರ್ಶೀ ಶಬ್ದಗಳೂ ಹಿಂದುಸ್ತಾನದ ಪ್ರಾಂತೀಯ ಭಾಷೆಗಳಲ್ಲಿ ಬೇಕಾದಷ್ಟು ಮಿಶ್ರವಾಗಿದ್ದುದನ್ನು ಸಾಮಾನ್ಯವಾಗಿ ಜನ ತಿಳಿದುಕೊಂಡಂತೆ ಕಾಣುವುದಿಲ್ಲ. ಈ ಶಬ್ದಗಳು ಸ್ವಾಭಾವಿಕವಾಗಿ ಹಿಂದುಸ್ತಾನಿಯಲ್ಲಿ ಸ್ಥಾನವನ್ನು ಪಡೆಯಬಲ್ಲವು. ಹಿಂದೀ ಮತ್ತು ಉರ್ದು ಎರಡೂ ಭಾಷೆಗಳಲ್ಲಿ ಹೆಚ್ಚಿಗೆ ಬಳಕೆಯಲ್ಲಿರುವ ಶಬ್ದಗಳು ಸ್ವಾಭಾವಿಕವಾಗಿ ಹಿಂದುಸ್ತಾನಿ ಶಬ್ದಕೋಶದಲ್ಲಿ ಸ್ಥಾನ ಪಡೆಯಬಲ್ಲವು.

ಹಿಂದುಸ್ತಾನಿಯ ಲಿಪಿಗಳ ಸಂಬಂಧವಾಗಿ ವಿಚಾರಮಾಡಬೇಕಾದರೆ ನಾಗರಿಯೆ ಮುಖ್ಯವಾದ ಲಿಪಿಯಾಗತಕ್ಕದ್ದು. ಕೇಂದ್ರ ಸರಕಾರದ ಕಾಗದಪತ್ರ, ಲೆಕ್ಕಪತ್ರಗಳನ್ನೆಲ್ಲ ಸಾಮಾನ್ಯವಾಗಿ ನಾಗರಿ ಲಿಪಿಯಲ್ಲಿಯೆ ಇಡತಕ್ಕದ್ದು. ಉರ್ದು ಲಿಪಿಯು ಗೌಣ ಲಿಪಿಯಾಗಿದ್ದು ನಾಗರಿಯ ಸರುವಾಯದಲ್ಲಿ ಉಪಯೋಗಿಸಲ್ಪಡತಕ್ಕದ್ದು. ಜನಸಾಮಾನ್ಯವನ್ನುದ್ದೇಶಿಸಿ ಹೊರಡತಕ್ಕ ಪ್ರಕಟನೆಗಳು ಹೇಳಿಕೆಗಳು, ಘೋಷಣೆಗಳು ಮೊದಲಾದವೆಲ್ಲ ಹಿಂದುಸ್ತಾನಿಯಲ್ಲಿ ನಾಗರಿ ಮತ್ತು ಉರ್ದು ಎರಡೂ ಲಿಪಿಗಳಲ್ಲಿ ಹೊರಡತಕ್ಕದ್ದು. ಕೇಂದ್ರ ಸರಕಾರಕ್ಕೆ ಬರೆದುಕೊಳ್ಳುವವರು ಇರಡರಲ್ಲಿ ಯಾವದಾದರೊಂದು ಲಿಪಿಯನ್ನು ಬಳಸಬಹುದು. ಅವರಿಗೆ ಪರಿಚಿತವಿರುವ ಲಿಪಿಯಲ್ಲಿಯೆ ಅವರು ಉತ್ತರವನ್ನು ನಿರೀಕ್ಷಿಸಬಲ್ಲರು.

ಸರಕಾರೀ ನವಕರರು ಮತ್ತು ಶಿಕ್ಷಕರು ಎರಡೂ ಲಿಪಿಗಳನ್ನು ಬಲ್ಲವರಾಗಿರತಕ್ಕದ್ದು. ಎರಡೂ ಲಿಪಿಗಳನ್ನು ಬಲ್ಲ ಕಾರಕೂನರನ್ನು ಹಿರಿಯ ಅಧಿಕಾರಿಗಳ ಸಹಾಯಕ್ಕಾಗಿ ಕೊಡತಕ್ಕದ್ದು. ಎಲ್ಲ ಶಾಲೆಗಳಲ್ಲಿ ಹಿಂದುಸ್ತಾನಿಯು ಪ್ರಾಥಮಿಕ ನಾಲ್ಕು ವರ್ಗಗಳ ನಂತರ ಐಚ್ಛಿಕ ವಿಷಯವಾಗತಕ್ಕದ್ದು. ಏಕಕಾಲಕ್ಕೆ ಇಲ್ಲವೆ ಒಂದರ ನಂತರ ಮತ್ತೊಂದನ್ನು ಹೀಗೆ ನಾಗರಿ ಮತ್ತು ಉರ್ದು ಎರಡೂ ಲಿಪಿಗಳನ್ನು ಕಲಿಯುವವರಿಗೆ ಉತ್ತೇಜನವನ್ನು ಕೊಡತಕ್ಕದ್ದು. ಎರಡೂ ಲಿಪಿಗಳನ್ನು ಲೋಕಪ್ರಿಯ ಮಾಡಲು ಸರಕಾರದವರು ಒತ್ತಾಯವೊಂದನ್ನು ಬಿಟ್ಟು ಉಳಿದೆಲ್ಲ ಬಗೆಯ ಪ್ರಯತ್ನ ಮಾಡುವದು ಕರ್ತವ್ಯವಾಗಿದೆ.

ವರ್ಧಾ — ಕಾಕಾ ಕಾಲೇಲಕರ

೧೦—೪—೪೮

## ಜಾಹೀರಾತಿನಲ್ಲಿ ಶಿಷ್ಟಾಚಾರ

ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಯ ಕಾರ್ಯದರ್ಶಿಗಳಾದ ಆಚಾರ್ಯ ಜೆ. ಬಿ. ಕೃಪಲಾನಿಯವರು ಪ್ರಕಟನೆಯೊಂದನ್ನು ಹೊರಡಿಸಿ ಕೆಲ ದಿನಗಳ ಹಿಂದೆ ಪತ್ರಿಕೆಗಳಿಗೆ ಕಳಿಸಿದ್ದಾರೆ.

“ಕೆಲ ಖಾಸಗಿ ವರ್ತಕರು ಗಾಂಧೀಜಿಯ ಹೆಸರನ್ನುಲ್ಲೇಖಿಸಿ ಪತ್ರಿಕೆಗಳಲ್ಲಿ ಜಾಹೀರಾತನ್ನು ಕೊಟ್ಟದ್ದನ್ನು ಓದಿ ನನಗೆ ವಿಷಾದವಾಗಿದೆ; ಗಾಂಧೀಜಿಯವರಿಗೆ ಗೌರವ ಕೊಡುವ ಉದ್ದೇಶದಿಂದಲೆ ಅವರು ಹೀಗೆ ಮಾಡಿದ್ದರೂ ತಮ್ಮ ವಿಶಿಷ್ಟ ಸರಕುಗಳ ಮಾರಾಟವಾಗಬೇಕೆಂದೇ ನಿಶ್ಚಯಃವಾಗಿ ಹಾಗೆ ಮಾಡಿದ್ದಾರೆ. ಅನೇಕ ಸಂದರ್ಭಗಳಲ್ಲಿ ಜಾಹಿರಾತು ಮಾಡಲ್ಪಟ್ಟ ವಸ್ತುಗಳಾದರೂ ಗಾಂಧೀಜಿಯಿಂದ ಉಪಯೋಗಕೆ ಅಪಾಯಕರ ಮತ್ತು ದೇಶಾಭಿಮಾನವಿರಹಿತವೆಂದು ಮುದ್ರೆಯೊತ್ತಲ್ಪಟ್ಟವು. ಹೀಗಿದ್ದರೂ ಆ ವಸ್ತುಗಳನ್ನು ಸಾಮಾಜಿಕ ಸಮಾರಂಭಗಳಲ್ಲಿ ಉಪಯೋಗಿಸುವದುಂಟು. ಆದರೆ ಇಷ್ಟರಿಂದಲೆ ಲಾಭದಾಸೆಯಿಂದ ಗಾಂಧೀಜಿಯ ಹೆಸರನ್ನು ಆ ವಸ್ತುವಿನ ಮಾರಾಟದ ಸಂಬಂಧದಲ್ಲಿ ಸೇರಿಸುವದು ಸರಿಯಾಗಲಾರದು. ಗಾಂಧೀಜಿ ಮೂಲತಃ ಜಾಹೀರಾತು ಕೊಡುವದಕ್ಕೇ ವಿರುದ್ಧ ಇದ್ದರು. ತಮ್ಮ ಪತ್ರಿಕೆಗಳಲ್ಲಿ ಅವರು ಎಂದೂ ಜಾಹೀರಾತು ಸ್ವೀಕರಿಸುತಿರಲಿಲ್ಲ ಎಂಬುದು ಸುಪ್ರಖ್ಯಾತವೇ ಇದೆ. ಆದುದರಿಂದ ಅವರು ಮನ್ನಣೆ ಕೊಡದಿದ್ದಂಥ ಉದ್ದೇಶ ಸಾಧನೆಗಾಗಿ ಅವರ ಹೆಸರಿನ ದುರುಪಯೋಗ ಮಾಡಿಕೊಳ್ಳುವದೆಂದರೆ ಅವರಿಗೆ ಬಹಳ ಕಡಮೆ ಬಗೆಯ ಗೌರವ ಕೊಟ್ಟಂತೆಯೇ. ಗಾಂಧೀಜಿ ಯಾವ ಧ್ಯೇಯಗಳನ್ನಿಟ್ಟುಕೊಂಡು ಅವುಗಳ ಸಾಧನೆಗಾಗಿ ಕಾರ್ಯ ಮಾಡಿದರೋ ಅಂಥ ಧ್ಯೇಯಗಳನ್ನು ಮನ್ನಿಸುವದರಿಂದಲೇ ನಿಜವಾಗಿ ಗಾಂಧೀಜಿಯವರಿಗೆ ತಕ್ಕುದಾದ ಮರ್‍ಯಾದೆ ಸಲ್ಲಿಸಿದಂತಾಗುತ್ತದೆ- ವರ್ತಕ ವರ್ಗದವರು ನನ್ನೀ ಬಿನ್ನಹವನ್ನು ಮನ್ನಿಸಿ ತಮ್ಮ ಜಾಹೀರಾತುಗಳಲ್ಲಿ ಗಾಂಧೀಜಿಯ ಹೆಸರನ್ನು ಉಪಯೋಗಿಸಲಿಕ್ಕಿಲ್ಲೆಂದು ನಾನು ನಂಬುತ್ತೇನೆ.

ಉಳಿದ ವರ್ಗದವರಂತೆ ವರ್ತಕ ವರ್ಗದವರೂ ತಮ್ಮ ವ್ಯವಹಾರಗಳಲ್ಲಿ ಗಾಂಧೀಜಿಯ ಹೆಸರನ್ನು ಸೇರಿಸಿ ಅವರಿಗೆ ತಕ್ಕ ಮರ್‍ಯಾದೆ ಕೊಡಬೇಕೆಂದು ಬಯಸುವದು ಸ್ವಾಭಾವಿಕ ಮತ್ತು ಪ್ರಶಂಸನೀಯವೇ. ಆದರೆ ಹೀಗೆ ಮಾಡಲು ಜಾಹೀರಾತುಗಳಲ್ಲಿ ಅಲ್ಲದೆ ಬೇರೆ ಅನೇಕ ಇಷ್ಟವಾದ ಮಾರ್ಗಗಳುಂಟು. ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಗೆ ಮುಕ್ತಹಸ್ತದಿಂದ ಸಹಾಯ ಮಾಡುವದು ಇಂಥದೊಂದು ಮಾರ್ಗ. ಅವರು ಹಾಗೆ ಮಾಡುತಿರುವರೆಂದೂ ಮಾಡುವರೆಂದೂ ನಾನು ನಂಬುತ್ತೇನೆ. ಉದ್ದಿಮೆದಾರರು ಸ್ಮಾರಕ ನಿಧಿ ಸಮಿತಿಯ ಪರವಾಗಿ ತಮ್ಮ ನೌಕರ ವರ್ಗದವರಿಂದ ನಿಧಿ ಸಂಗ್ರಹ ಕಾರ್ಯವನ್ನು ಮಾಡಿದ್ದಾದರೆ ಸ್ಮಾರಕ ನಿಧಿ ಸಮಿತಿಯ ಕಾರ್ಯವು ಹಗುರಾಗಿ ಅವರಿಗೆ ಸಹಾಯ ಮಾಡಿದಂತಾಗುವದು.

“ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಯ ಪರವಾಗಿ ಇಲ್ಲವೆ ಅದರ ಸಹಾಯಕ್ಕಾಗಿ ಸಿನೇಮಾ; ಶರ್‍ಯತ್ತು ಮತ್ತು ಉಳಿದ ಕಲಾವಿಲಾಸಿಗಳ ಇಲ್ಲವೆ ಧಂದೆಗಾರರ ನಾಟಕ ಮುಂತಾದವುಗಳನ್ನು ತೆಗೆದುಕೊಳ್ಳುವುದನ್ನೂ ನಾನು ನಿಷೇಧಿಸುತ್ತೇನೆ. ಆಯಾ ಸಂಘ ಸಂಸ್ಥೆಯವರು ತಮ್ಮ ಹೊಣೆಗಾರಿಕೆಯಲ್ಲಿಯೆ ಇವೆಲ್ಲವನ್ನು ಸಂಘಟಿಸಬೇಕು. ಮತ್ತು ಸಾರ್ವಜನಿಕರು ಅವುಗಳ ಯೋಗ್ಯತೆಗೆ ತಕ್ಕಂತೆ ಉದಾರಾಶ್ರಯವನ್ನು ಕೊಡಬಹುದು. ಗಾಂಧೀಜಿ ಬದುಕಿರುವಾಗ ಯಾವ ಚಟುವಟಿಕೆಗಳ ಬಗೆಗೆ ಅವರು ಉದಾಸೀನರಾಗಿದ್ದರೊ ಇಲ್ಲವೆ ಪೂರ್ಣವಾಗಿ ವಿರೋಧಿಗಳಾಗಿದ್ದಾರೊ ಅಂಥ ಚಟುವಟಿಕೆಗಳಲ್ಲಿ ಅವರ ಹೆಸರು ಬರತಕ್ಕದ್ದಲ್ಲ ಇಷ್ಟೇ.

ನಿಧಿಯ ಉದ್ದೇಶ ಮೊದಲಾದವುಗಳನ್ನು ಪ್ರಸಿದ್ಧಿಸಿ ಅದಕ್ಕೆ ಸಹಾಯ ಸಲ್ಲಿಸುವದು ಸಾರ್ವಜನಿಕರ ಕರ್ತವ್ಯವಾಗಿದೆಂದು ಅವರನ್ನು ಪ್ರಚೋದಿಸಿ “ಪತ್ರಿಕೆಗಳು ನಿಧಿ ಸಮಿತಿಗೆ ಸಹಾಯ ಸಲ್ಲಿಸುತ್ತ ಹೋಗುವವೆಂದು ನಾನು ನಂಬುತ್ತೇನೆ.”

ಈ ಪ್ರಕಟನೆಯೇನು ಅಕಾಲಿಕವಾಗಿಲ್ಲ ಆಗಸ್ಟ ೧೫ ರ ನಂತರ ಪ್ರತಿಯೊಂದು ವ್ಯಾಪಾರಿ ಸಂಸ್ಥೆಯು ರಾಷ್ಟ್ರೀಯ ಧ್ವಜದ ಚಿತ್ರದಿಂದಲೆ ತನ್ನ ಜಾಹೀರಾತನ್ನು ಪ್ರಸಿದ್ಧ ಮಾಡಹತ್ತಿದಾಗಲೆ ಈ ಬಗೆಯ ವಿರೋಧ ಅವಶ್ಯವೆನಿಸಿತು. ಹಿಂದವಾಸಿಗಳಾದ ನಾವು ವಿಶೇಷತಃ ಹಿಂದುಗಳು ಯಾರನ್ನು ವಿಶೇಷ ಭಕ್ತಿಯಿಂದ ಪೂಜಿಸುವೆವೊ ಅಂಥವರೊಡನೆಯೆ ವಿವೇಕವನ್ನು ಉಪಯೋಗಿಸದೆ ಅಸಂಚಿತ ರೀತಿಯಿಂದ ವರ್ತಿಸುವದುಂಟು. ಹಿಂದೂ ದೇವತೆಗಳ ಮತ್ತು ಅವತಾರ ಪುರುಷರ ಚಿತ್ರಗಳು ಕಡ್ಡಿ ಪೆಟ್ಟಿಗೆಗಳ ಮೇಲೆ, ಸಿಗರೇಟು ಪೆಟ್ಟಿಗೆಗಳ ಮೇಲೆ, ಶರೇ ಬಾಟಲಿಗಳ ಮೇಲೆ, ಅಂಗಡಿಗಳ ಹಲಿಗೆಗಳ ಮೇಲೆ ಮತ್ತು ಇನ್ನು ಅನೇಕ ಸಂದರ್ಭಗಳಲ್ಲಿ ಔದ್ಧತ್ಯದಿಂದ ಮುದ್ರಿಸಿದ್ದುಂಟು. ಒಂದೆಡೆ ಅವರನ್ನು ದೇವರೆಂದು ನಾವು ಪೂಜಿಸುತ್ತೇವೆ. ಆದರೆ ಅದೇ ಕಾಲಕ್ಕೆ ಅವರನ್ನು ನಾಟಕದಲ್ಲಿ ಚಿತ್ರಪಟಗಳಲ್ಲಿ ಕಾಣಿಸುತ್ತೇವೆ. ಮತ್ತು ಅವರ ಹೆಸರಿನ ಅಂಗಡಿ ಮುಂತಾದವುಗಳನ್ನೂ ತೆರೆಯುತ್ತೇವೆ.

ನಾಟ್ಯ ಗೃಹದಲ್ಲಿ ಇಲ್ಲವೆ ಜಾಹೀರಾತುಗಳಲ್ಲಿ ಮತ್ತು ಪ್ರಕಟನೆಗಳ ಹಲಗೆಗಳ ಮೇಲೆ ಅಥವಾ ವ್ಯವಹಾರದಲ್ಲಿ ನೀವು ಜೀಸಸನ ಇಲ್ಲವೆ ಮಹಮ್ಮದನ ಹೆಸರನ್ನು ಕಾಣಲಾರಿರಿ. ಜೀಸಸ್‌ಕ್ರಾಯಿಸ್ಟ ಮಿಲ್ಸ ಇಲ್ಲವೆ ರಸೂಲ ಮಹಮ್ಮದ ಫಾರ್ಮಸಿ ಎಂಬ ಹೆಸರನ್ನು ನೀವು ಕೇಳಲಾರಿರಿ. ಕ್ರಿಶ್ಚನರು ಇಲ್ಲವೆ ಮುಸಲ್ಮಾನರು ಇದನ್ನೆಂದಿಗೂ ಸಹಿಸಲಾರರು. ಯಾವನೊಬ್ಬ ಮನುಷ್ಯನಿಗೆ ದೇವತ್ವವನ್ನು ಕಲ್ಪಿಸುವಾಗ ಅವನನ್ನು ರಂಗಭೂಮಿಯ ಮೇಲೆ ತರುವದು ಪಾಖಂಡತನವಾಗದಿದ್ದರೂ ಕೆಟ್ಟ ನಡವಳಿಯೆಂದು ತಿಳಿಯಬೇಕಾಗುವದು. ಅವನ ಮೂರ್ತಿಯನ್ನು ಪ್ರದರ್ಶಿಸುವದು ಇಲ್ಲವೆ ಅವನ ಪಾತ್ರವನ್ನು ವಹಿಸಿ ನಟಿಸಿ ತೋರಿಸುವದು ಅಥವಾ ಲಾಭವದಿಂದ ವ್ಯವಹಾರಕ್ಕೆ ಆ ಹೆಸರನ್ನು ಕೊಡುವದೂ ಅದೇ ಬಗೆಯ ಕೆಟ್ಟ ನಡವಳಿಯೆಂದು ತಿಳಿಯಬೇಕಾಗುವದು.

ವರ್ಧಾ    ಕಿಶೋರಲಾಲ
೪—೪—೪೮    ಮಶ್ರೂವಾಲಾ

---

## ಪತ್ರಿಕೋದ್ಯೋಗದ ಮಟ್ಟ

ಗಾಂಧೀಜಿ “ಹರಿಜನ” ವನ್ನು ಸಂಪಾದಿಸುತಿದ್ದಾಗ ವಾರವಾರವೂ ಅವರ ಸಂಗಡ ಕೆಲಸ ಮಾಡಿದ ಸುದೈವಿಗಳಿಗೆ ಆ ಪತ್ರಿಕಾ ಸಮ್ರಾಟನ ತೀಕ್ಷ್ಣ ದೃಷ್ಟಿಗೆ ಒಳಪಡಿಸದೆ ಆ ಪತ್ರಿಕೆಗೆ ಏನನ್ನಾದರೂ ಬರೆದು ಕಳಿಸುವದೊಂದು ವಿಚಿತ್ರ ಅನುಭವವೆನಿಸೀತು. ಸ್ವತಃ ತಾವೇ ಬರೆದುದನ್ನು ಕೂಡ ಅವರು ಎಚ್ಚರದಿಂದ ವಿಮರ್ಶಿಸುತಿದ್ದ ಬಗೆ, ಮಹಾದೇವ ದೇಸಾಯಿಯಂಥವರು ಬರೆದ ಲೇಖಗಳಲ್ಲಿ ಕೂಡ ಗರುಡ ದೃಷ್ಟಿಯಿಂದ ಶಬ್ದಶಬ್ದವನ್ನು ಪರಿಶೀಲಿಸುತಿದ್ದ ರೀತಿ, ಸರಿಯಾದ ಶಬ್ದ ಪ್ರಯೋಗವೇ ಆಗಬೇಕೆಂಬ, ವಿದ್ಯಮಾನಗಳ ವಿಷಯದಲ್ಲಿ ಪರಿಪೂರ್ಣ ಸತ್ಯಕ್ಕೇ ಅಂಟಿಕೊಳ್ಳಬೇಕೆಂಬ, ಅವಶ್ಯವಿದ್ದುದಕಿಂತ ಒಂದೇ ಒಂದು ಶಬ್ದವನ್ನಾದರೂ ಹೆಚ್ಚಿಗೆ ಬಳಸಬಾರದೆಂಬ ಅವರ ಹಟ, ಉತ್ತಮ ಸಾಹಿತ್ಯ ಶೈಲಿಯ ಬಗ್ಗೆ ಅವರ ಮೆಚ್ಚಿಕೆ, ಒಳ್ಳೆಯ ಬರವಣಿಗೆಯೆಂದು ಬಗೆಯಲ್ಪಟ್ಟದ್ದರಲ್ಲಿ ಎಷ್ಟೋ ಅಂಶವನ್ನು, ಒಮ್ಮೊಮ್ಮೆ ಎಲ್ಲವನ್ನೂ ಅವರು ನಿರ್ದಾಕ್ಷಿಣ್ಯವಾಗಿ ಕಿತ್ತೊಗೆಯುತಿದ್ದುದು, ಇವೆಲ್ಲ ಮರೆಯಲಾರದ ಪಾಠಗಳಾಗಿದ್ದವು. ಆದರೆ ಅವನ್ನು ನೆನೆದುಕೊಂಡಾಗ, ನಮ್ಮಂಥ ಬಡಪಾಯಿಗಳ ಪ್ರಯತ್ನಗಳು ಸಾರ್ವಜನಿಕ ಜೀವನಕ್ಕೆ ಅವರಿತ್ತ ಅನುಪಮ ಸೆವೆಗಳಲ್ಲೊಂದಾದ ಪತ್ರಿಕಾವೃತ್ತಿಯ ಮೇಲ್ತರದ ಮಟ್ಟಕ್ಕೆ ಬರಬಹುದೇ ಎಂಬ ಸಂದೇಹ ಮೂಡುತ್ತದೆ.

“ಹರಿಜನ”ಕ್ಕೆ ಅಖಿಲ ಹಿಂದುಸ್ತಾನದಲ್ಲಿ ಮಾತ್ರವಲ್ಲ, ವಿದೇಶಗಳಲ್ಲಿಯೂ ಅನೇಕ ಓದುಗರಿದ್ದರು. ಅವರೆಲ್ಲ ಅದನ್ನು ಓದುತಿದ್ದುದು ಗಾಂಧೀಜಿಯ ಲೇಖಗಳು ಯಾವಾಗಲೂ ವಿಚಾರ ಪ್ರಚೋದಕವಾಗಿದ್ದವೆಂಬೊಂದೇ ಕಾರಣಕ್ಕಾಗಿ ಅಲ್ಲ, ಅದರಿಂದ ಸಂಗ್ರಹಿಸಬಹುದಾದ ವಿದ್ಯಮಾನಗಳು ಹದಿನಾರಾಣೆ ಸತ್ಯವೇ ಆಗಿರುತಿದ್ದವೆಂಬ ಕಾರಣಕ್ಕಾಗಿಯೂ. ಅಲ್ಲದೆ, “ಹರಿಜನ” ವನ್ನೋದಿದ ಬಳಿಕ ಮೊದಲು ತನಗೆ ಗೊತ್ತಿಲ್ಲದಿದ್ದ ಅಂಶಗಳನ್ನು ಅರಿತುಕೊಂಡಂತೆ ಅನುಭವವಾಗುತ್ತಿತ್ತು. ಮತ್ತು ಆ “ಅಂಶ” ಗಳು ಹೆಚ್ಚಾಗಿ ಸ್ವಯಂವೇದ್ಯ ಸತ್ಯಗಳೇ ಆಗಿರುತಿದ್ದುದನ್ನು ನೋಡಿ ಆಶ್ಚರ್ಯವಾಗುತಿತ್ತು.

ಸ್ವತಃ ಗಾಂಧೀಜಿ ಪತ್ರಿಕೋದ್ಯೋಗಿಗಳಾದುದು ಆಕಸ್ಮಾತ್ತಾಗಿ. ದಕ್ಷಿಣ ಆಫ್ರಿಕೆಯಲ್ಲಿ ಅವರು ಹೋರಾಟ ಹೂಡಿದಾಗ ಒಂದು ಪತ್ರಿಕೆಯ ಅವಶ್ಯಕತೆ ಕಂಡುಬಂತು. ಮತ್ತು ತಮ್ಮ ಸ್ವಾಭಾವಿಕ ಸತ್ವ ನಿರ್ಧಾರಗಳಿಂದ ಅವರು ಆ ಕಾರ್ಯಕ್ಕೆ ಕೈ ಹಾಕಿದರು. ತಾವು ಮನಸು ಹಾಕಿದ್ದೆಲ್ಲವನ್ನು ಅವರು ಸುಲಭವಾಗಿ ವೈಗೂಡಿಸಿಕೊಂಡಂತೆ ಇದೂ ಅವರಿಗೆ ಲೀಲಾಯಮಾನವಾಗಿ ಸಾಧಿಸಿತು.

ಈಗ ಕಿಶೋರಲಾಲ ಮಶ್ರುವಾಲರ ಮೇಲೆ ಭಾರವಾದ ಹೊರೆ ಬಿದ್ದಿದೆ. ಅದನ್ನು ಹೊರುವದರಲ್ಲಿ ಅವರಿಗೆ ಕೈಲಾದ ಸಹಾಯ ಮಾಡುವದು ನಮ್ಮೆಲ್ಲರ ಕರ್ತವ್ಯ.

“ಹರಿಜನ”ದ ಲೇಖಗಳು, ಅವರು ಯಾವುದನ್ನು ಅನುಕೂಲ್ಯವೆಂದು ಬಗೆಯಲು ನಮಗೆ ಕಲಿಸಿದ್ದರೋ ಅವುಗಳನ್ನು ನೆನಪಿಗೆ ತಂದುಕೊಡುವಂತಾದರೆ, “ಹರಿಜನ” ಪತ್ರಿಕೆ ತಾನು ಅವರ ಧ್ಯೇಯಗಳಿಗೆ ನಿಷ್ಠವಾಗಿ ಉಳಿದು ನಮಗೂ ಅಂಥ ನಿಷ್ಠೆಯನ್ನು ಕಾಯ್ದುಕೊಳ್ಳುವಲ್ಲಿ ಸಹಾಯಕವಾದರೆ, ಅದು ದೊಡ್ಡ ಕೆಲಸ ಮಾಡಿದಂತೆಯೆ.

ಪತ್ರಿಕೆಗಳು ಸತ್ಯದಿಂದ ಚ್ಯುತವಾಗುತ್ತಿರುವುದನ್ನು ನೋಡಿ ಈಚೆಗೆ ಗಾಂಧೀಜಿಗೆ ಬಹಳ ವ್ಯಥೆಯಾಗಿತ್ತು. ಸರಕಾರಿ ನೇಮಕಗಳ ವಿಷಯದಲ್ಲಿ ತಮಗಾವ ಸಂಬಂಧವಿಲ್ಲದಿದ್ದರೂ ಪತ್ರಿಕೆಗಳು ನಡೆಸುತಿದ್ದ ಊಹಾಪೋಹಗಳನ್ನು ನೋಡಿ ಅವರಿಗೆ ಜುಗುಪ್ಸೆ ಬರುತಿತ್ತು. ಸುಳ್ಳು ಸುದ್ದಿಗಳನ್ನು ನಿರ್ಮಿಸುವದನ್ನು ಕಂಡರೆ ಅವರಿಗಾಗುತಿದ್ದಿಲ್ಲ; ಬೆಲೆಯಿಲ್ಲದ ವಿಷಯಗಳಿಗೆ ವೃಥಾ ಮಹತ್ವ ಕೊಡುವದು ಅವರಿಗೆ ಸೇರುತ್ತಿರಲಿಲ್ಲ; ಪತ್ರಿಕೋದ್ಯೋಗಿಯೆಂಬ ಹೆಸರಿಗೆ ಅರ್ಹನಾದವನು “ಗುಟ್ಟಿನ ಸುದ್ದಿ” ಗಳ ಮೋಹಕ್ಕೆ ಹೇಗೆ ಬೀಳಬಲ್ಲನೆಂಬದೇ ಅವರಿಗೆ ಅರ್ಥವಾಗುತಿರಲಿಲ್ಲ. ಗುಟ್ಟಾಗಿರಲ್ಪಟ್ಟ ಸುದ್ದಿಗಳು ಪತ್ರಿಕೆಗಳ ಕೈಗೆ ಬಿದ್ದರೂ ಅಧಿಕೃತ ವರ್ಗಗಳಿಂದ ಅವು ಹೊರಗೆಡಹಲ್ಪಡುವ ವರೆಗೆ ಅವನ್ನು ಪ್ರಕಟಿಸಬಾರದೆಂದು ಅವರು ಹೇಳುತಿದ್ದರು. ನಮ್ಮ ಪತ್ರಪತ್ರಿಕೆಗಳಲ್ಲಿ ಮೇಲಿಂದ ಮೇಲೆ ರಾರಾಜಿಸುವ ಅಶ್ಲೀಲ ಜಾಹಿರಾತುಗಳು ಅವರಲ್ಲಿ ತಿರಸ್ಕಾರವನ್ನುಂಟುಮಾಡುತಿದ್ದವು. ಜಾಹಿರಾತುಗಳಿಂದ ಹುಟ್ಟುವ ರೊಕ್ಕದ ಬಲವಿಲ್ಲದೆ ಬದುಕಲಾರದ ಪತ್ರಿಕೆಗಳು ಓದಲಿಕ್ಕೇ ಯೋಗ್ಯವಲ್ಲವೆಂದು ಅವರು ಎಷ್ಟೋ ಸಲ ಹೇಳಿದ್ದುಂಟು. ವಾಚನಾರ್ಹ ವಿಷಯಗಳಿಗೇ ಅವರು ಬೆಲೆ ಕೊಡುತಿದ್ದರಲ್ಲದೆ ಬೇರಾವದಕ್ಕೂ ಅಲ್ಲ. ಓಳಿತು ಕೆಡಕುಗಳ ಪಕ್ಷದಲ್ಲಿ ಪತ್ರಿಕೆಗಳು ಬೀರಬಹುದಾದ ಪ್ರಭಾವಕ್ಕೆ ಅವರು ಅತ್ಯಂತ ಮಹತ್ವ ಕೊಡುತಿದ್ದರು.

ಯಾವನೇ ಕ್ಷೇತ್ರದಲ್ಲಿ ಯಾವದೇ ಕೆಲಸವಾದರೂ ಗಾಂಧೀಜಿಯ ದೃಷ್ಟಿಯಲ್ಲಿ ಕೇವಲ ಸೇವಾಸಾಧನವಾಗಿತ್ತು. ಅವರು ಹಾಕಿ ಕೊಟ್ಟ ಅನಿಂದ್ಯವಾದ ಮಟ್ಟವನ್ನು ಅನುಸರಿಸುವ ಅಥವಾ ಅನುಸರಿಸಲು ಯತ್ನಿಸುವ ಮೂಲಕ, ನಮ್ಮ ಪ್ರಿಯ ನಾಯಕನಿಗೆ ಪತ್ರಿಕೆಗಳು ಉಚಿತವಾದ ಸ್ಮಾರಕವನ್ನು ನಿರ್ಮಿಸಬಹುದು.

ಹೊಸದಿಲ್ಲಿ    —ಅ. ಕಾ.
೨೯—೩—೪೮

---

## ಮಹಾತ್ಮಾ ಗಾಂಧಿ ಅವಶೇಷ ಸಂರಕ್ಷಕ ಸಮಿತಿ

ಸೇವಾಗ್ರಾಮದಲ್ಲಿ ತಾ. ೧೬ ರಂದು ರಚನಾತ್ಮಕ ಕಾರ್ಯಕರ್ತರ ಸಭೆಯು ಡಾ. ರಾಜೇಂದ್ರ ಪ್ರಸಾದರ ಅಧ್ಯಕ್ಷತೆಯಲ್ಲಿ ಸೇರಿತ್ತು. ಆಗ ಮಹಾತ್ಮಾ ಗಾಂಧೀಜಿಯ ಅವಶೇಷಗಳನ್ನೆಲ್ಲ ಜೋಪಾನವಾಗಿ ಕಾಯ್ದಿಡಲೋಸುಗ ಅವಶೇಷ ಸಂರಕ್ಷಕ ಸಮಿತಿಯೊಂದನ್ನು ಸ್ಥಾಪಿಸಲಾಯಿತು. ಅದಕ್ಕೆ ರಾಜೇಂದ್ರ ಪ್ರಸಾದರು ಅಧ್ಯಕ್ಷರು, ಶ್ರೀ ಕಾಕಾ ಸಾಹೇಬ ಕಾಲೇಲಕರರು ಕಾರ್ಯದರ್ಶಿಗಳು ಮತ್ತು ಶ್ರೀ ದೇವದಾಸ ಗಾಂಧಿ, ಶ್ರೀ ಪ್ಯಾರೇಲಾಲ ಹಾಗೂ ಶ್ರೀ ಕಮಲನಯನ ಬಜಾಜ ಇವರು ಸದಸ್ಯರು. ಹೆಚ್ಚಿನ ಸದಸ್ಯರನ್ನು ಸಮಾವೇಶ ಮಾಡಿಕೊಳ್ಳುವ ಅಧಿಕಾರವನ್ನು ಅವರಿಗೆ ಕೊಡಲಾಗಿದೆ. ಈ ಸಮಿತಿಯ ಪ್ರಕಟನೆಯಲ್ಲಿ ಹೀಗಿದೆ.—

ಮಹಾತ್ಮಾ ಗಾಂಧಿ ಅವರಿಗೆ ಸಂಬಂಧ ಪಟ್ಟ ಅವರ ಪತ್ರಗಳು ಉಪಕರಣಗಳು ಫೋಟೋಗಳು ಬರೆಹಗಳು ಮಹಾತ್ಮರು ಧನ ಸಂಚಯಕ್ಕಾಗಿ ಲಿಲಾವು ಮಾಡಿದ ಕೆಲವು ಪದಾರ್ಥಗಳು ಇವುಗಳನ್ನೆಲ್ಲ ಈ ಸಂರಕ್ಷಕ ಸಮಿತಿಗೆ ಒಪ್ಪಿಸುವ ಔದಾರ್ಯವನ್ನು ತೋರಬೇಕಲ್ಲದೆ ಅದಾವುದೇ ಬಗೆಯ ವೈಶಿಷ್ಟ್ಯದಿಂದ ಕೂಡಿದ ಸಂಗತಿ, ಸ್ಥಳ, ಊರು ಇವೇ ಮೊದಲಾದವುಗಳ ಸಮಾಚಾರವನ್ನು ಅರುಹ ಬೇಕು.

ಇತಿಹಾಸದ ದೃಷ್ಟಿಯಿಂದ ಇವೆಲ್ಲವುಗಳ ಸಂರಕ್ಷಣೆ ಅತ್ಯಂತ ಮಹತ್ವದ್ದೆಂದೂ ಗಾಂಧೀ ರಾಷ್ಟ್ರೀಯ ಸ್ಮಾರಕ ಸಮಿತಿಯು ರಚಿತವಾದಾಗ ಈ ಎಲ್ಲ ಸಂಚಿತ ಅವಶೇಷಗಳನ್ನು ಅದಕ್ಕೆ ಒಪ್ಪಿಸಲಾಗುವದೆಂದೂ ಪ್ರಕಟನೆಯಲ್ಲಿ ಹೇಳಲಾಗಿದೆ.

ಗಾಂಧೀಜಿಗೆ ಸಂಬಂಧಿಸಿದ ಒಡವೆಗಳನ್ನು ಹತ್ತಿರ ಇಟ್ಟುಕೊಳ್ಳುವದರಲ್ಲಿ ಅವನ್ನುಳ್ಳವರಿಗೆ ಒಂದು ಬಗೆಯ ಹೆಮ್ಮೆ ಎನ್ನಿಸುವದು ಸ್ವಾಭಾವಿಕವಿದ್ದರೂ ಅಂತಹರು ಈ ಮೋಹವನ್ನು ನಿಗ್ರಹಿಸಿ ವಿಶಾಲ ದೃಷ್ಟಿ, ವ್ಯಾಪಕ ಪ್ರಯೋಜನ ಮನದಂದು ಅವುಗಳನ್ನು ಸಂರಕ್ಷಕ ಸಮಿತಿಗೆ ಒಪ್ಪಿಸುವ ದೊಡ್ಡ ಮನಸ್ಸು ತೋರಬೇಕೆಂದು ಸಮಿತಿಯು ಬೇಡಿದೆ.

ಇದಕ್ಕೆ ಸಂಬಂಧ ಪಟ್ಟ ವ್ಯವಹಾರವನ್ನು, ಕಾರ್ಯದರ್ಶಿ, ಕಾಕಾ ಸಾಹೇಬ ಕಾಲೇಲಕರ, ಕಾಕಾವಾಡಿ,ವರ್ಧಾ, ಈ ವಿಳಾಸಕ್ಕೆ ಮಾಡಬೇಕು ಈ ಬಗ್ಗೆ ಪತ್ರ ವ್ಯವಹಾರ ಮಾಡುವವರು ತಮ್ಮ ಹೆಸರು ವಿಳಾಸ ಸ್ಪುಟವಾಗಿ ಬರೆದಿರಬೇಕು.

---

## ಪೂರ್ವ ಪಂಜಾಬದಲ್ಲಿ ವಿನೋಬಾ

(ಎಪ್ರಿಲ ೩ ನೆಯ ತಾರೀಕು ಶ್ರೀ ವಿನೋಬಾ ಇವರು ಪೂರ್ವ ಪಂಜಾಬಿನ ಗುರುಗಾಂವ ಜಿಲ್ಲೆಯ ಒಂದು ಹಳ್ಳಿಯನ್ನು ಸಂದರ್ಶಿಸಿದರು. ಅಲ್ಲಿ ಸುಮಾರು ಇಪ್ಪತ್ತು ಮೇವಾ ಗುರ್ಗಾಂವಜನರಿಂದ ಕೂಡಿದ ಒಂದು ಸಭೆಯಲ್ಲಿ ಅವರು ಭಾಷಣ ಮಾಡಿದರು. ಅದರ ಭಾಷಣದ ಸಾರವಿದು— ಸಂಪಾದಕ).

ಮೇವಾ ಗುರ್ಗಾಂವಜನರು ಅನುಭವಿಸಿದ ಕಷ್ಟ ನಿಷ್ಠುರಗಳ ಅರಿವು ನನಗಿದೆ ಎಂದು ಪ್ರಾರಂಭಿಸಿದರು ಶ್ರೀ ವಿನೋಬಾ. ಸ್ವಾತಂತ್ರ್ಯವು ಸುಖದ ಸಾಧನವೆಂದೆನಿಸಬೇಕಾದರೆ ಯಾವ ಕರಾರುಗಳನ್ನು ಪಾಲಿಸಬೇಕೆಂಬ ಬಗ್ಗೆ ಸ್ವಾತಂತ್ರ್ಯ ಸಿಕ್ಕ ಕೂಡಲೆ ದೇಶವು ಪಾಠವನ್ನು ಕಲಿಯಬೇಕಾಗಿತ್ತೆಂದು ತೋರುತ್ತದೆ. ಪಾಪಕೃತ್ಯಗಳ ಪರಿಣಾಮಗಳನ್ನು ನೀವು ಸಂಪೂರ್ಣವಾಗಿ ಅನುಭವಿಸಿದ್ದುಂಟು. ವಿವಿಧ ಜಾತಿಗಳು ಇರುತಿರುವ ವಿಶಾಲ ನಾಡು ನಮ್ಮದೆಂಬುದನ್ನು ನಿಮ್ಮ ಸ್ಮರಣೆಗೆ ತರಬಯಸುತ್ತೇನೆ. ಈ ಎಲ್ಲ ಜಾತಿಯ ಜನರು ಪ್ರೇಮ ಸ್ನೇಹ ಸೌಹಾರ್ದದಿಂದ ಇದ್ದುದಾದರೆ ದೇಶವು ಬಲಿಷ್ಠವಾಗಿ ಘನತೆ ಮತ್ತು ಸುಖ ಸೌಕರ್ಯಗಳಿಂದ ಪ್ರಗತಿಹೊಂದುವದು. ಇಲ್ಲದಿದ್ದರೆ ಅದರ ಘಾತಕೆಯೇ ವಿನಾಶಕ್ಕೆ ಕಾರಣವಾಗಬಲ್ಲದು.

ತಾವು ತಮ್ಮತಮ್ಮೊಳಗೆ ಸಾಕಷ್ಟು ಬಡಿದಾಡಿದೆವೆಂಬುದರ ಅರಿವು ಜನರಿಗೆ ಈಗ ಆಗಿರಲಿಕ್ಕು ಸಾಕೆಂದು ನಾನು ಭಾವಿಸುತ್ತೇನೆ. ಯಾವದೇ ಬಗೆಯ ವಿಶಿಷ್ಟ ದೋಷವನ್ನು ನಾನು ಅವರ ಮೇಲೆ ಹೊರಿಸಬಯಸುವುದಿಲ್ಲ. ದೇಶದಲ್ಲೆಲ್ಲ ಕೆಟ್ಟ ಗಾಳಿಯೊಂದು ಬೀಸಿ ಹೋಯಿತು. ಅದರ ದುಷ್ಪರಿಣಾಮ ನಿಮ್ಮ ಮೇಲೆ ಮತ್ತು ಲಕ್ಷಾವಧಿ ಇತರ ಜನರ ಮೇಲೆ ಆದದುಂಟು. ಸಭ್ಯ ಜನರಿಗೂ ಅದರಿಂದ ಹಾನಿಯಾದುದುಂಟು. ದೇವರ ದಯೆಯಿಂದ ಆ ಗಾಳಿಯೀಗ ನಿಂತಿದೆ. ಮತ್ತು ಅನುಕೂಲ ಗಾಳಿ ಬೀಸಹತ್ತಿದೆ. ಆ ಕೆಟ್ಟ ಗಾಳಿಗೆ ಬಲಿಬಿದ್ದು ಅಂಧರಾದವರ ಮೇಲೆಯೂ ಇದರ ಸತ್ಪರಿಣಾಮವಾಗುವದೆಂದು ನಾನು ಆಶಿಸುತ್ತೇನೆ.

ಪರಮಾತ್ಮನು ಮಾನವನಿಗೆ ಇಬ್ಬಗೆಯ ಮಹತ್ವದ ಶಕ್ತಿಗಳನ್ನು ದಯಪಾಲಿಸಿರುವನು. ಮೊದಲನೆಯದು ಸ್ಮರಣ ಶಕ್ತಿ, ಎರಡನೆಯದು ವಿಸ್ಮರಣ ಶಕ್ತಿ. ಯಾವುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು ಮತ್ತು ಯಾವದನ್ನು ಮರೆತುಬಿಡತಕ್ಕದ್ದು ಎಂಬುದನ್ನು ನಾವು ನಿರ್ಧರಿಸಿಕೊಳ್ಳಲಿಕ್ಕೆ ಬೇಕು. ಈ ಬಗೆಯಾಗಿ ನಿರ್ಧಾರ ಮಾಡಿಕೊಳ್ಳುವ ಸಮಯವೇನೂ ಇನ್ನೂ ಮೀರಿಲ್ಲ. ಕೆಟ್ಟ ಇದ್ದುದನ್ನು ಮರೆಯುವದು ಎರಡನೆಯವರು ಒಳಿತು ಮಾಡಿದ್ದನ್ನು ನೆನಪಿನಲ್ಲಿಡುವದೇ ಯೋಗ್ಯವಾದ ವಿಮರ್ಶೆ. ಪರಮಾತ್ಮನಲ್ಲಿ ವಿಶ್ವಾಸವಿಟ್ಟು ನಾವು ಧೈರ್ಯದಿಂದ ಮತ್ತು ಪರಸ್ಪರ ಪ್ರೇಮದಿಂದ ಕೂಡಿಯೇ ಇರತಕ್ಕದ್ದು. ನಮಗೆ ಕಲ್ಯಾಣಕರವಾವುದೆಂಬುದು ಪರಮಾತ್ಮನಿಗೆ ಗೊತ್ತುಂಟು. ಅವನೇ ನಮ್ಮ ವಕೀಲನು. ನಮ್ಮ ಸಲುವಾಗಿ ಅವನು ವಾದಿಸಿ ನಮ್ಮ ಹಿತ ಸಂಬಂಧಗಳನ್ನು ರಕ್ಷಿಸುವನು. ಈ ವಿಶ್ವಾಸವೇ ನಮ್ಮ ಶಕ್ತಿ ಮತ್ತು ಧೈರ್ಯದ ತಾರಕ ಮಂತ್ರವಾಗಿರತಕ್ಕದ್ದು. ಜನರೆಲ್ಲ ಪರಮಾತ್ಮನ ಮಕ್ಕಳೆಂಬುದನ್ನು ನಾವು ಮರೆಯಬಾರದು. ಇದುದರಿಂದ ನಾವೆಲ್ಲರನ್ನು ಪ್ರೀತಿಸತಕ್ಕದ್ದು ಮತ್ತು ಪರಸ್ಪರ ಬಾಂಧವರೆಂದು ಭಾವಿಸತಕ್ಕದ್ದು. ಪರಮಾತ್ಮನ ಸೇವಕರಲ್ಲಿ ಧೈರ್ಯ ಮತ್ತು ಪ್ರೇಮವೇ ಸದ್ಗುಣಗಳು.

ಹೃದಯ ಸಮ್ಮಿಲನವೆ ಧರ್ಮದ ಕರ್ತವ್ಯವು. ಆದರಿಂದು ಧರ್ಮವು ವಿಧ್ವಂಸಕ ಶಕ್ತಿಯಾಗಿದೆ. ಪರಿಣಾಮವೆಂದರೆ ಪ್ರತಿಯೊಂದು ಧರ್ಮವೂ ಅವಹೇಳನಕ್ಕೆ ಗುರಿಯಾಗಿದೆ. ಅನೇಕ ಒಳ್ಳೆಯ ಜನರು ಈ ಎಲ್ಲ ಧರ್ಮಗಳನ್ನು ಬಿಟ್ಟುಗೊಡುವದು ಒಳಿತೆಂದು ಭಾವಿಸಹತ್ತಿದ್ದಾರೆ. ಅಳಿಯುವರಿಗೆ ಪರಿಸ್ಥಿತಿ ಬಾರದಂತೆ ನೋಡಿಕೊಳ್ಳಬೇಕೆಂದು ನಾನು ಬಿನ್ನವಿಸುತ್ತೇನೆ.

ಈ ದೇಶವು ನಿಮ್ಮದು, ನೀವು ಈ ದೇಶದವರು. ಹಿಂದಿನದನ್ನೆಲ್ಲ ಮರೆತು ಹೊಸದಾಗಿ ಜೀವನವನ್ನು ಪ್ರಾರಂಭಿಸಿರಿ. ಹಾಗೆ ನೀವು ವರ್ತಿಸಿದ್ದಾದರೆ ಇಷ್ಟೊಂದು ಅವನತ ಸ್ಥಿತಿಗೆ ನಾವು ಇಳಿದಿದ್ದೆವೊ ಎಂಬ ಬಗ್ಗೆ ಆಶ್ಚರ್ಯಚಕಿತರಾಗುವ ಒಂದು ದಿನವೂ ಬರಬಹುದು.

ನಿಮಗೆ ಧೈರ್ಯವನ್ನು ಕೊಡಲಿಕ್ಕೆ ನಾನಿಲ್ಲಿಗೆ ಬಂದಿರುವೆ— ನೀವು ನಿರಾಶರಾಗಕೂಡದು. ಪರಮಾತ್ಮನಲ್ಲಿ ವಿಶ್ವಾಸವಿದ್ದವರು ಎಂದಿಗೂ ನಿರಾಶರಾಗತಕ್ಕದ್ದಲ್ಲ.

# ಹಿರಿಯೋಲಗದ ಚಟುವಟಿಕೆಗಳು

ತಾ. ೭ ರಂದು ಹಿರಿಯೋಲಗವು ಔದ್ಯೋಗಿಕ ಧೋರಣದ ಗೊತ್ತುವಳಿಯನ್ನು ಅಂಗೀಕರಿಸಿತು. ಈಗಿದ್ದ ಯಾಂತ್ರಿಕ ಶಕ್ತಿಯಿಂದಲೇ ನೂರಕ್ಕೆ ೨೦ ರಿಂದ ೩೦ ರಷ್ಟು ಉತ್ಪತ್ತಿ ಹೆಚ್ಚಿಸಲು ಸಾಧ್ಯವಿದೆ ಎಂದು ಔದ್ಯೋಗಿಕ ಶಾಖೆಯ ಮಂತ್ರಿ ಡಾ. ಶ್ಯಾಮಪ್ರಸಾದ ಮುಖರ್ಜಿ ಅವರು ಹೇಳಿದರು.

## ಲಾಭದಲ್ಲಿ ಕೂಲಿಕಾರರಿಗೆ ಪಾಲು

ಉದ್ಯೋಗ ಮಂತ್ರಿಗಳು ಈ ಬಗ್ಗೆ ಮಾತನಾಡುತ್ತ, ಕೂಲಿಕಾರರಿಗೆ ಕಾರಖಾನೆಯ ಲಾಭದಲ್ಲಿ ಪಾಲು ಸಿಗಬೇಕೆಂದೂ ಈ ರೀತಿ ಲಾಭ ಸಿಗುವಂತಾದರೆ ಕೂಲಿಕಾರರು ಹೆಚ್ಚು ಹೆಚ್ಚು ದುಡಿದು ಉತ್ಪತ್ತಿ ಹೆಚ್ಚಿಸಲು ತಾವಾಗಿಯೇ ಮುನಮುಟ್ಟಿ ಪ್ರಯತ್ನಿಸುವರೆಂದೂ ಹೇಳಿದರು. ಕೂಲಿಕಾರರೂ ಬಂಡವಲಗಾರರೂ ಈ ಸಮಸ್ಯೆಯನ್ನು ತಾವಾಗಿ ಬಿಡಿಸಿಕೊಳ್ಳದಿದ್ದರೆ ಸರಕಾರವೇ ತನ್ನ ನಿರ್ಣಯವನ್ನು ಒತ್ತಾಯದಿಂದ ಹೇರಬೇಕಾಗಬಹುದು ಎಂದು ಮೊದಲಾಗಿ ಹೇಳಿದರು.

ಈ ಬಗ್ಗೆ ಅನೇಕರು ಅನುಕೂಲ ಪ್ರತಿಕೂಲ ವಿಚಾರಗಳನ್ನು ಮಂಡಿಸಿ ಮಾತನಾಡಿದರು. ಸರ್ ಪ್ಯಾಲಾಪ್ರಸಾದರ ಭಾಷಣಾನಂತರ ಮುಖ್ಯ ಮಂತ್ರಿ ಪಂ. ಜವಾಹರಲಾಲರು ಚರ್ಚೆಗೆ ಉತ್ತರ ಕೊಡುತ್ತ ಮಾತನಾಡಿದರು. ಕೊನೆಗೆ ಉದ್ಯೋಗ ಮಂತ್ರಿಗಳೂ ಮಾತನಾಡಿ ಈ ಮಸೂದೆಯ ಸಮರ್ಪಕತೆಯನ್ನು ಬಿಂಬಿಸಿದ ಮೇಲೆ ಗೊತ್ತುವಳಿಯು ಸ್ವೀಕೃತವಾಯಿತು.

## ಪ್ರಾದೇಶಿಕ ಸೈನ್ಯ ರಚನೆ

ತಾ. ೮ ರಂದು, ಸಂರಕ್ಷಣ ಶಾಖೆಯ ಮಂತ್ರಿಗಳಾದ ಸರದಾರ ಬಲದೇವಸಿಂಗರು ಹಿಂದುಸ್ತಾನದ ತರುಣರಿಗೆ ಸೈನ್ಯ ಶಿಕ್ಷಣ ಕೊಡುವ ಬಗ್ಗೆ ಸರಕಾರವು ಯೋಚಿಸಿದ ವಿಚಾರಗಳನ್ನು ಹಿರಿಯೋಲಗದಲ್ಲಿ ತಿಳಿಸಿದರು. ಸೈನ್ಯ ಶಿಕ್ಷಣ ಕೊಡುವ ತಜ್ಞ ಅಧಿಕಾರಿಗಳ ಕೊರತೆಯಿದ್ದರೂ ಸದ್ಯದ ಪರಿಸ್ಥಿತಿಯನ್ನು ಗಮನಿಸಿ ಪ್ರಾದೇಶಿಕ ಸೈನ್ಯ ನಿರ್ಮಾಣದ ಯೋಜನೆಯನ್ನು ಕೂಡಲೆ ಕೈಕೊಳ್ಳಬೇಕೆಂದು ಸರಕಾರವು ನಿರ್ಧರಿಸಿದೆ. ಈ ಬಗೆಯ ಪ್ರಾದೇಶಿಕ ಸೈನ್ಯ ಯೋಜನೆ ಮತ್ತು ರಾಷ್ಟ್ರೀಯ ಸೈನಿಕ ವಿದ್ಯಾಪೀಠದ ಯೋಜನೆಗಳಿಂದ ಜನತೆಗೆ ಸ್ವಲ್ಪಾದರೂ ಸಮಾಧಾನವೆನಿಸಬಹುದೆಂದು ಅವರು ಹೇಳಿದರು.

## ಪ್ರಾದೇಶಿಕ ಸೈನ್ಯದ ಹೊಣೆ

ಈ ಸೈನ್ಯದ ಹೊಣೆಗಾರಿಕೆಯನ್ನು ನಿರೂಪಿಸುತ್ತ ಸಂರಕ್ಷಣ ಮಂತ್ರಿಗಳು ಹೀಗೆ ಹೇಳಿದರು. (೧) ದೇಶಕ್ಕೆ ಗಂಡಾಂತರ ಒದಗಿದಾಗ ಪ್ರಾದೇಶಿಕ ಸೈನ್ಯವು ಮುಖ್ಯ ಸೈನ್ಯದ ಬೆಂಬಲಕ್ಕಿದ್ದು ಕೆಲಸ ಮಾಡಬೇಕು. (೨) ಪ್ರಸಂಗ ಬಂದರೆ ದೇಶದಲ್ಲಿ ಸುವ್ಯವಸ್ಥೆಯನ್ನು ಕಾಯುವ ಹೊಣೆ ಹೊತ್ತು ಮುಖ್ಯ ಸೈನ್ಯವನ್ನು ಆ ಕೆಲಸದಿಂದ ಬಿಡಿಸಬೇಕು. (೩) ಕರಾವಳಿ ಸಂರಕ್ಷಣೆಗಾಗಿ ಮತ್ತು ವಿಮಾನ ನಿರೋಧ ಪಡೆಯಲ್ಲಿ ಕೆಲಸ ಮಾಡಲು ಸಜ್ಜಾಗಿರಬೇಕು. (೪) ಹಿಂದುಸ್ತಾನದ ತರುಣರಿಗೆ ಸೈನ್ಯ ಶಿಕ್ಷಣ ಕೊಟ್ಟು ದೇಶ ರಕ್ಷಣೆಗೆ ಅವರನ್ನು ಅಣಿಗೊಳಿಸಲು ಸಿದ್ಧವಾಗಿರಬೇಕು.

## ಎಂಟು ಪ್ರಾದೇಶಿಕ ಠಾಣ್ಯಗಳು

ಸದ್ಯಕ್ಕೆ ಪ್ರಾದೇಶಿಕ ಸೈನ್ಯದಲ್ಲಿ ೧ಲಕ್ಷ ೩೦ ಸಾವಿರ ಜನರನ್ನು ಸೇರಿಸಿಕೊಳ್ಳಬೇಕೆಂದು ಮಾಡಿದೆ. ಈ ಸೈನ್ಯವನ್ನು ಕೆಳಗೆ ಕಾಣಿಸಿದ ೮ ಪ್ರದೇಶಗಳಲ್ಲಿ ಹಂಚಲಾಗುವದು. (೧)ಪೂರ್ವ ಪಂಜಾಬ, ಪೂ. ಪಂಜಾಬ ಸಂಸ್ಥಾನಗಳು, ದಿಲ್ಲಿ ಪ್ರಾಂತ ಸಹಿತ ರಜಪುತಾನಾ (೨) ಸಂಯುಕ್ತ ಪ್ರಾಂತ (೩) ಮಧ್ಯಪ್ರಾಂತ ಮತ್ತು ಪೂರ್ವ ಸಂಸ್ಥಾನಗಳು (೪) ಮುಂಬಯಿ ಮತ್ತು ಕಾಠೇವಾಡ(೫)ಮದ್ರಾಸ,ಮೈಸೂರು,ತಿರುವಾಂಕೂರು (೬) ಬಿಹಾರ, ಓಡಿಸಾ (೭) ಪಶ್ಚಿಮ ಬಂಗಾಲ ಮತ್ತು ಕೂಚ ಬಿಹಾರ (೮) ಆಸಾಮ, ಮಣಿಪುರ ತ್ರಿಪುರಾ.

ಮೇಲ್ಕಾಣಿಸಿದ ಪ್ರಾದೇಶಿಕ ವಿಭಾಗಗಳು ಹೆಚ್ಚು ಕಡಿಮೆ ಈಗಿದ್ದ ಪ್ರಾದೇಶಿಕ ಠಾಣ್ಯಗಳನ್ನೇ ಹೋಲುವವು.

## ಹಿಂದೀ ಸೈನ್ಯ ರಾಷ್ಟ್ರೀಕರಣ

ಹಿಂದೀ ಸೈನ್ಯದ ರಾಷ್ಟ್ರೀಕರಣ ಯೋಜನೆಯನ್ನು ೧೯೪೭ ಡಿಸೆಂಬರದಲ್ಲಿಯೇ ಗೊತ್ತು ಮಾಡಲಾಗಿತ್ತು. ಅದೇ ಕ್ರಮವನ್ನು ಅನುಸರಿಸಿ ಈ ಕೆಲಸ ಸಾಗಿದೆ. ಇನ್ನೂ ಕೆಲದಿನ ನಮಗೆ ಬ್ರಿಟಿಶ ಸೈನ್ಯಾಧಿಕಾರಿಗಳ ನೆರವು ಬೇಕು ಆದರೆ ಇವರ ಸಂಖ್ಯೆಯು ೩೦ಕ್ಕಿಂತ ಹೆಚ್ಚು ಇರಲಿಕ್ಕಿಲ್ಲ. ಈಗ ೪ ಪ್ರಾದೇಶಿಕ ಠಾಣ್ಯಗಳನ್ನು ಬಿಟ್ಟು ಉಳಿದ ಎಲ್ಲ ಠಾಣ್ಯಗಳಿಗೆ ಹಿಂದೀಯರೇ ಅಧಿಪತಿಗಳಾಗಿದ್ದಾರೆ.

ವಿಮಾನ ಹಾಗೂ ನೌಕಾ ಶಾಖೆಗಳಲ್ಲಿಯೂ ಹಿಂದೀಕರಣವು ಭರದಿಂದ ಸಾಗಿದೆ. ಕೇವಲ ೨೦ ಬ್ರಿಟಿಶ ಅಧಿಕಾರಿಗಳು ಈ ಶಾಖೆಗಳಲ್ಲಿ ಉಳಿಯಬಹುದು. ಇದೇ ಏಪ್ರಿಲ ೧ನೇ ತಾ. ನಿಂದ ಹಿಂದುಸ್ತಾನದ ಮುಖ್ಯ ಸೇನಾಪತಿಯ ಸ್ಥಳಕ್ಕೆ ಹಿಂದೀ ಅಧಿಕಾರಿಯನ್ನು ನೇಮಿಸಬೇಕೆಂದು ಮಾಡಿತ್ತು. ಆದರೆ ಇಂದಿನ ವಿಷಮ ಪರಿಸ್ಥಿತಿಯ ಮೂಲಕ ಹಾಗೆ ಮಾಡಬಾರದೆಂದು ನಿರ್ಧರಿಸಲಾಗಿದೆ. ನುರಿತ ಅಧಿಕಾರಿಗಳಾದ ಜ. ಬುಚರರೇ ಇನ್ನೂ ಕೆಲಕಾಲ ಹಿಂದುಸ್ತಾನದ ಮುಖ್ಯ ಸೇನಾಪತಿಯಾಗಿ ಉಳಿಯುವರು.

ಚರ್ಚಾನಂತರ ರಾಷ್ಟ್ರೀಯ ವಿದ್ಯಾರ್ಥಿ ದಲ ಸಂಘಟಿಸುವ ಮಸೂದೆಯು ತಾ. ೮ ಕ್ಕೆ ಅಂಗೀಕೃತವಾಯಿತು.

ಅರಗಿನ ಮೇಲಿದ್ದ ಸುಂಕವನ್ನು ಇಮ್ಮಡಿ ಮಾಡಬೇಕೆಂಬ ಮಸೂದೆಯೂ ಅಂದೇ ಸ್ವೀಕೃತವಾಯಿತು.

## ಅಸ್ಪೃಶ್ಯತೆಯ ಉಚ್ಚಾಟನೆ

ಅಂದಿನ ಪ್ರಶ್ನೋತ್ತರ ಕಾಲಕ್ಕೆ ಆರೋಗ್ಯ ಮಂತ್ರಿ ರಾಜಕುಮಾರಿ ಅಮೃತ ಕುವರರು, ಸೇಠ ಗೋವಿಂದದಾಸರಿಗೆ, ಭಾರತದಿಂದ ಅಸ್ಪೃಶ್ಯತೆಯ ಭೂತವನ್ನು ನಿರ್ನಾಮಗೊಳಿಸಲು ಸರಕಾರವು ಪಣತೊಟ್ಟಿದೆ. ಎಂಬುದಾಗಿ ಹೇಳಿದರು.

## ಹಿಂದೂ ಕಾಯದೆ ತಿದ್ದುಪಡಿ

ತಾ. ೯ ರಂದು ಹಿಂದೀ ಕಾಯದೆಯನ್ನು ಕ್ರೋಢೀಕರಿಸುವ ಮಸೂದೆಯನ್ನು ಪರಿಶೀಲನಾ ಸಮಿತಿಗೆ ಒಪ್ಪಿಸಬೇಕೆಂಬ ಗೊತ್ತುವಳಿಯನ್ನು ಸ್ವೀಕರಿಸಿ ಓಲಗವು ಅನಿಯಮಿತ ಅವಧಿಯವರೆಗೆ ಮುಂದರಿದಿತು. ಈ ಮಸೂದೆಯನ್ನು ಕಾನೂನು ಶಾಖೆಯ ಮಂತ್ರಿಗಳಾದ ಡಾ. ಬಿ. ಆರ್. ಅಂಬೇಡಕರರು ಮಂಡಿಸಿದಾಗ ಸದಸ್ಯರು ಆನಂದದಿಂದ ಕರತಾಡನಮಾಡಿ ಸ್ವಾಗತಿಸಿದರು.

## ಆಸ್ತಿಯಲ್ಲಿ ಮಗನ ಅರ್ಧಪಾಲು ಮಗಳಿಗೆ

ವಾರಸಾ ಹಕ್ಕುಗಳ ಬಗ್ಗೆ ಈಗಿದ್ದ ಕಾನೂನ್ನು ರದ್ದುಪಡಿಸಿ ಹೆಣ್ಣುಮಕ್ಕಳಿಗೆ ಆಸ್ತಿಯಲ್ಲಿ ಗಂಡುಮಕ್ಕಳ ಅರ್ಧ ಪಾಲು ಸಲ್ಲತಕ್ಕದ್ದು, ಜಾತಿ ಭೇದವಿಲ್ಲದೆ ಬೇಕಾದ ಕನ್ಯೆಯನ್ನು ಲಗ್ನವಾಗುವ ಹಕ್ಕು, ಏಕಪತ್ನಿತತ್ವಕ್ಕೆ ಮನ್ನಣೆ, ವಿವಾಹ ವಿಚ್ಛೇದನಕ್ಕೆ ಅಧಿಕಾರ ಇವೇ ಈ ಮಸೂದೆಯ ಮುಖ್ಯಾಂಶಗಳಾಗಿವೆ. ಇದರಲ್ಲಿ ವರದಕ್ಷಿಣೆಯ ಬಗ್ಗೆಯೂ ಒಂದು ಕಲಮು ಇದೆ. ಪುರುಷನ ಮೇಲೆ ಅವಲಂಬಿಸಿದವರಲ್ಲಿ ಅವನನ್ನು ಅವಲಂಬಿಸಿಕೊಂಡ ವೇಶ್ಯೆಯ ಸಮಾವೇಶವನ್ನೂ ಮಾಡಲಾಗಿದೆ.

ಡಾ. ಪಟ್ಟಾಭಿಯವರು ಇದಕ್ಕೆ ಪ್ರಗತಿಶೀಲ ಮಸೂದೆಯೆಂದು ಹೇಳಿ ಬೆಂಬಲಕೊಟ್ಟರು. ಶ್ರೀಮತಿ ಹಂಸಾ ಮೆಹತಾ ಅವರು ಇದಕ್ಕೆ ಬೆಂಬಲ ಕೊಡುತ್ತ ಮಗನ ಅರ್ಧದಷ್ಟು ಪಾಲು ಮಗಳಿಗೆ ಎಂದು ಈ ಮಸೂದೆಯಲ್ಲಿ ಕಾಣಿಸಲಾಗಿದೆ. ಇದು ತಪ್ಪು, ಮಗನಷ್ಟೇ ಮಗಳಿಗೂ ಪಾಲು ಸಿಗಬೇಕು ಎಂದು ಹೇಳಿದರು.

ರೋಹಿಣಿ ಕುಮಾರ ಚೌಧರಿಯವರು ಈ ಮಸೂದೆಯನ್ನು ಟೀಕಿಸಿ ಮಾತನಾಡಿದರು. ಡಾ. ಅಂಬೇಡಕರರು ಸಮಯೋಚಿತ ಉತ್ತರ ಕೊಟ್ಟನಂತರ ಮಸೂದೆಯು ಪರಿಶೀಲಕ ಸಮಿತಿಗೆ ಕಳಿಸುವ ಗೊತ್ತುವಳಿ ಸ್ವೀಕೃತವಾಯಿತು.

## ನಿಜಾಮರ ಅಸಮಂಜಸ ಉತ್ತರ

ಅಂದಿನ ಓಲಗದಲ್ಲಿಯೇ ಹೈದರಾಬಾದದ ಪರಿಸ್ಥಿತಿಯ ಬಗ್ಗೆ ನಿಜಾಮ ಸರಕಾರವು ಕಳುಹಿದ ಅಸಮಂಜಸ ಹಾಗೂ ನಿರಾಶಾದಾಯಕ ಉತ್ತರದ ಬಗ್ಗೆಯೂ ಇತ್ತೆಹಾದುಲ್ ಮುಸಲ್ಮೀನ ಅಧ್ಯಕ್ಷರಾದ ಕಾಸೀಮ ರಜವಿಯವರು ತಾ. ೩೧ ಮಾರ್ಚ ದಿನ ಮಾಡಿದ ಹೊಣೆಗೆಟ್ಟ ಭಾಷಣದ ಬಗ್ಗೆಯೂ ಚರ್ಚೆ ನಡೆಯಿತು. ಶ್ರೀ. ಸಕ್ಸೇನಾರು ಈ ಬಗ್ಗೆ ಒಂದು ನಿಲುವಳಿ ಸೂಚನೆಯನ್ನು ತಂದಿದ್ದರು.

ಭಾರತ ಸರಕಾರವು ಕಳಿಸಿದ ರಾಯಸಕ್ಕೆ ನಿಜಾಮ ಸರಕಾರವು ಮುಖ್ಯ ಮುದ್ದೆಗಳನ್ನೇ ಕಡೆಗಣಿಸಿ ಹೊಸದಾಗಿ ಅಸಂಬದ್ಧ ಮುದ್ದೆಗಳನ್ನು ಎತ್ತಿ ಪ್ರತ್ಯಾರೋಪದ ಉತ್ತರವನ್ನು ತನ್ನ ಪ್ರತಿನಿಧಿ ಮಂಡಲದ ಮುಖಾಂತರ ಕಳಿಸಿತ್ತು. ಮುಖ್ಯ ಮಾತುಗಳನ್ನಲ್ಲದೆ ಅನ್ಯ ವಿಷಯಗಳನ್ನು ಚರ್ಚಿಸುವದರಿಂದ ಪ್ರಯೋಜನವಿಲ್ಲವೆಂದು ಭಾರತ ಸರಕಾರವು ನಿರ್ಧರಿಸಿದ ಸಂಗತಿಯು ಇಂದಿನ ಓಲಗದಲ್ಲಿ ತಿಳಿದುಬಂದಿತು.

# ಹದಗೆಟ್ಟ ಹೈದರಾಬಾದ

## ಹಿಂದುಸ್ತಾನ ಮೊಗಲಾಯಿಯಲ್ಲ

ಹೈದರಾಬಾದವು ದಿನದಿನಕ್ಕೆ ಹದಗೆಡುತ್ತ ಸಾಗಿದೆ. ಇಲ್ಲಿಯ ಜನರ ವಿತ್ತ ಜೀವನಗಳಿಗೆ ಅಲ್ಲಿಯ ಸರಕಾರದ ಸಂರಕ್ಷಣೆ ಸಿಗದಾಗಿದೆ. ನಿಜಾಮರಿಗಿಂತ ಇಂದು ಅಲ್ಲಿ ರಜಕಾರರ ಮುಖಂಡರಾದ ಕಾಸೀಮ ರಜವಿಯವರೇ ದಟ್ಟಾಳಿಕೆಯ ರಾಜ್ಯಭಾರ ನಡೆಸಿ ಸ್ವೈರಾಚಾರ ಸಾಗಿಸಿಬಿಟ್ಟಿದ್ದಾರೆ. ಇದನ್ನು ಹಿಂದುಸ್ತಾನದ ಮುಸಲ್ಮಾನ ಮುಖಂಡರೂ ಸಹ ಖಂಡಿಸಿ ಪ್ರಕಟನೆ ಹೊರಡಿಸಹತ್ತಿದ್ದಾರೆ.

ಬಂಗಾಲದ ರಾಷ್ಟ್ರೀಯ ಮುಸಲ್ಮಾನರ ಮುಖಂಡರಾದ ಡಾ. ಅಹಮ್ಮದರು ತಾ. ೧೬ಕ್ಕೆ ಒಂದು ಹೇಳಿಕೆ ಹೊರಡಿಸಿ ಕಾಸೀಮ ರಜವಿಯವರ ಕೃತಿಯನ್ನು ತೀವ್ರವಾಗಿ ಖಂಡಿಸಿದ್ದಾರೆ ಅವರ ಹೇಳಿಕೆಯ ಸಾರ ಹೀಗಿದೆ— ಹಿಂದುಸ್ತಾನ ಸರಕಾರವು ಹೈದರಾಬಾದದ ಮೇಲೆ ಕೈಯೆತ್ತಿದರೆ ಹಿಂದುಸ್ತಾನದಲ್ಲಿದ್ದ ೪||ಕೋಟಿ ಮುಸಲ್ಮಾನರು ಹಿಂದುಸ್ತಾನ ಸರಕಾರದ ವಿರುದ್ಧ ಬಂಡಾಯ ಹೂಡುವರೆಂದೂ ಅವರೆಲ್ಲ ಹೈದರಾಬಾದದ ಪರಿಯಿಂದ ಪಂಚಮದಲದವರಾಗಿ ಕೆಲಸ ಮಾಡುವರೆಂದೂ ರಜವಿಯವರು ಹೇಳಿದ್ದಾರೆ. ರಜವಿಯವರಷ್ಟು ಸುಳ್ಳು ಹೇಳುವವರೇ ಜಗದಲ್ಲಿ ಇರಲಿಕ್ಕಿಲ್ಲ. ಹಿಂದುಸ್ತಾನವೆಂದರೆ ಮೊಗಲಾಯಿ ಎಂತಲೂ ಹಿಂದುಸ್ತಾನದ ಮುಸಲ್ಮಾನರೆಂದರೆ ಮೂರ್ಖರೆಂತಲೂ ರಜವಿಯವರು ತಿಳಿದಂತೆ ಕಾಣುತ್ತದೆ. ರಜವಿಯವರಂಥ ಜಾತ್ಯಂಧ ಮುಸಲ್ಮಾನರು ಈಗಾಗಲೇ ಹಿಂದುಸ್ತಾನದಿಂದ ಪಾಕಿಸ್ತಾನಕ್ಕೆ ಹೋಗಿ ಸೇರಿ ಅಲ್ಲಿ ಸುಖ ಸುರಿಯುತ್ತಿದ್ದಾರೆ. ಹಿಂದುಸ್ತಾನದ ಮುಸಲ್ಮಾನರು ರಜವಿಯವರ ಮೋಹದ ಮಾತಿಗೆ ಬಲಿಬೀಳದೆ ಮುಸಲ್ಮಾನರಿಗಾಗಿಯೇ ಪ್ರಾಣಾರ್ಪಣ ಮಾಡಿದ ಮಹಾತ್ಮರನ್ನು ಸ್ಮರಿಸಿ ಹಿಂದುಸ್ತಾನದ ಹಿತಕ್ಕೂ ಶಾಂತಿಗೂ ಹೆಣಗಿ ತಾವೂ ಸುಖಿಗಳಾಗಿರಬೇಕು.

## ಹೈದರಾಬಾದ ಬಹು ದಿನ ಬಾಳದು

ಹಿಂದುಸ್ತಾನ ಸರಕಾರದ ಶಿಕ್ಷಣಮಂತ್ರಿಗಳಾದ ಮೌ. ಅಬುಲಕಲಂ ಆಝಾದರು ಹೈದರಾಬಾದದ ಬಗ್ಗೆ ಒಂದು ಹೇಳಿಕೆ ಕೊಡುತ್ತ ತಾ. ೧೨ರಂದು ಹೀಗೆ ಹೇಳಿದರು:— ನಿಜಾಮರು ಕಾಲಮಾನಕ್ಕೆ ತಕ್ಕಂತೆ ನಡೆದುಕೊಳ್ಳದಿದ್ದರೆ, ತಲೆತಿರುಕರ ಕೈಗೊಂಬೆಯಾಗಿ ತಾಳಬಿಟ್ಟು ತಾಂಡವ ನಡೆಸಿದರೆ ಹೈದರಾಬಾದವು ಬಹು ದಿನ ಬಾಳಲಾರದು. ಇತ್ತೆಹಾದವು ಸ್ವತಂತ್ರ ಸೈನ್ಯ ರಚಿಸುತ್ತಿದೆ ಎಂಬ ಮಾತನ್ನು ನಿರಾಕರಿಸಲು ಶಕ್ಯವಿಲ್ಲ. ಯಾವ ಸರಕಾರವೂ ಸ್ವತಂತ್ರ ಸೈನ್ಯ ರಚನೆಗೆ ಅಸ್ಪದ ಕೊಡಲಾರದು. ನಿಜಾಮರು ಈ ಅಕ್ರಮ ಸೈನ್ಯದ ವಿರುದ್ಧ ಕ್ರಮ ತಗೆದುಕೊಳ್ಳಲೇಬೇಕು. ರಾಜಕೀಯ ಸುಧಾರಣೆಯನ್ನು ಸಾರಿ ಜೊಣೆಗಾರ ಸರಕಾರ ಸ್ಥಾಪಿಸಬೇಕು. ಹಿಂದುಸ್ತಾನವು ಹೈದರಾಬಾದದ ಬಗ್ಗೆ ಸಾಕಷ್ಟು ತಾಳ್ಮೆ ತೋರಿದೆ. ನಿಜಾಮರು ಸರಿಯಾದ ದಾರಿಯಲ್ಲಿ ಹೆಜ್ಜೆ ಹಾಕದಿದ್ದರೆ ಪರಿಸ್ಥಿತಿ ಕೈಮೀರಬಹುದಲ್ಲದೆ ಹೈದರಾಬಾದದ ಅಸ್ತಿತ್ವವೇ ಅಡಗುವ ಭೀತಿಯಿದೆ. ಹಿಂದುಸ್ತಾನ ಸರಕಾರವು ಖಂಡಿತ ಉಗ್ರ ಕ್ರಮ ಕೈಕೊಳ್ಳುವದು.

## ಇನ್ನೊಂದು ಪಾಕಿಸ್ತಾನವೇ?

### ಒಂದರಿಂದೇ ಸಾಕುಬೇಕಾಗಿದೆ

ಸಂಯುಕ್ತಪ್ರಾಂತದ ಸಂಪರ್ಕ ಶಾಖೆಯ ಮಂತ್ರಿಗಳೂ ಮುಸಲ್ಮಾನ ಹಿಂದ ಪರಿಷತ್ತಿನ ಸಂಘಟಕರೂ ಆದ ಹಫೀಜ ಮಹಮ್ಮದ ಇಬ್ರಾಹಿಮರು ತಾ. ೧೪ರಂದು ಒಂದು ಪ್ರಕಟನೆ ಹೊರಡಿಸಿ ಹೈದರಾಬಾದದ ಮುಸಲ್ಮಾನ ಮುಖಂಡರನ್ನು ಖಂಡಿಸಿರುವರಲ್ಲದೆ ಒಂದು ಪಾಕಿಸ್ತಾನದಿಂದಲೇ ಸಾಕುಬೇಕಾಗಿ ಹೋಗಿರುವಾಗ ಇನ್ನೊಂದು ಪಾಕಿಸ್ತಾನದ ವಿಚಾರವೆಂದರೆ ಮುಸಲ್ಮಾನರ ಸರ್ವನಾಶದ ಹಾದಿಯನ್ನು ಹಾಕಲು ಹೊರಟಂತೆ ಎಂದು ಉದ್ಗಾರ ತೆಗೆದಿದ್ದಾರೆ. ಅವರು ಹೇಳಿದುದರ ಅಭಿಪ್ರಾಯ ಹೀಗಿದೆ—

ನಿಜಾಮರು ಮುಜಲೀಸರ ಮುತ್ತು ರಜಕಾರರ ಹೊಣೆಗೇಡಿ ಹಾಗೂ ಕಿಡಿಗೇಡಿ ಚಟುವಟಿಕೆಗಳನ್ನು ಹತ್ತಿಕ್ಕಲು ಏನೂ ಮಾಡುತ್ತಿಲ್ಲ. ಇದಕ್ಕೆ ಹೇತುಶೂನ್ಯತೆಯೇ ಅಥವಾ ಧರ್ಮಾಂಧರ ಹೊಂಚಿನಲ್ಲಿ ಸಂಚುಗಾರರಾಗಿರುವರನ್ನೋ? ಹಿಂದುಸ್ತಾನ ಒಕ್ಕೂಟಕ್ಕೆ ಇವರನ್ನು ದಮನಿಸಲು ಬಹಳ ಕಾಲ ಬೇಕಾಗಲಿಕ್ಕಿಲ್ಲ. ಹೈದರಾಬಾದವು ಜಾತೀಯತೆಯ ಸುಳಿಯಲ್ಲಿ ಮುಳುಗುತ್ತಿದೆ. ಹಿಂದುಸ್ತಾನ ಒಕ್ಕೂಟದ ಮಧ್ಯದಲ್ಲಿ ಸಿಕ್ಕಿದ್ದ ತಮ್ಮ ಸಂಸ್ಥಾನದ ಭವಿತವ್ಯ ಹಾಗೂ ಕಲ್ಯಾಣದ ಉಪಾಯ ಹುಡುಕಲು ಅಲ್ಲಿಯ ಮುಸಲ್ಮಾನ ಮುಖಂಡರು ಅಸಮರ್ಥರಾಗಿದ್ದಾರೆ ಹೈದರಾಬಾದ ಮುಸಲ್ಮಾನರ ಪ್ರಕ್ಷೋಭಕಾರಕ ಹಿಂಸಾತ್ಮಕ ಮಾರ್ಗಕ್ಕೆ ಹಿಂದುಸ್ತಾನದ ಮುಸಲ್ಮಾನರೆಂದೂ ಬೆಂಬಲ ಕೊಡರು. ಅಪಪ್ರಚಾರಕ್ಕೆ ಹಿಂದೀ ಮುಸಲ್ಮಾನರು ಮೋಸಹೋಗಲಾರರು. ಪಾಕಿಸ್ತಾನದ ಸಲುವಾಗಿ ಹಿಂದಿ ಮುಸಲ್ಮಾನರು ಬಹು ಬೆಲೆ ತೆತ್ತರು. ಕಾಸೀಮ ರಜವಿಯವರು ಮತ್ತೊಂದು ಪಾಕಿಸ್ತಾನದ ಕನಸು ಕಾಣುತ್ತಿದ್ದಾರೆ. ಪಾಕಿಸ್ತಾನದ ಕಟುಫಲವನ್ನು ಭೋಗಿಸಿದ ಹಿಂದಿ ಮುಸಲ್ಮಾನರು ರಜವಿಯವರನ್ನು ಎಲ್ಲ ಕಷ್ಟನಷ್ಟ ಸಹಿಸಿಯೂ ವಿರೋಧಿಸುವರು.

## ಸಾಮ್ಯವಾದಿಗಳ ಹೋರಾಟದ ಸಿದ್ಧತೆ

ಹಿಂದುಸ್ತಾನದ ಹೊಣೆಗಾರ ಮುಸಲ್ಮಾನರು ಮೇಲ್ಕಾಣಿಸಿದಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾರೆ. ಸಾಮ್ಯವಾದಿಗಳಂತೂ ಇನ್ನೂ ಮುಂದೆ ಹೋಗಿ, ಬೇಗ ಹೈದರಾಬಾದ ದೊಡನೆ ಸಶಸ್ತ್ರ ಹೋರಾಟವನ್ನೇ ಹೂಡಬೇಕೆನ್ನುವಷ್ಟು ಉದ್ರೇಕಗೊಂಡಿದ್ದಾರೆ. ಹೈದರಾಬಾದ ಹೋರಾಟದ ಬಗ್ಗೆ ಸಾಮ್ಯವಾದಿ ಪಕ್ಷವು ಒಂದು ಸಮಿತಿಯನ್ನೇ ಸ್ಥಾಪಿಸಿದೆ. ಈ ಸಮಿತಿಗೆ ಶ್ರೀಮತಿ ಅರುಣಾ ಅಸಫಅಲ್ಲಿ ಅಧ್ಯಕ್ಷರಾಗಿದ್ದಾರೆ. ತಾ. ೧೦ ಕ್ಕೆ ಮುಂಬಯಿಯಲ್ಲಿ ಪತ್ರಿಕಾ ಪ್ರತಿನಿಧಿಗಳ ಸಭೆಯಲ್ಲಿ ಮಾತನಾಡುತ್ತ

[೧೨ನೆಯ ಪುಟಕ್ಕೆ]

## ಸಹನೆಯ ಅತಿರೇಕ

ಈ ಬಗ್ಗೆ ಮುಖ್ಯ ಮಂತ್ರಿಗಳಾದ ಪಂ. ಜವಾಹರಲಾಲರು ಮಾತನಾಡುತ್ತ, ಹೈದರಾಬಾದದಲ್ಲಿ ರಜಕಾರರು ಹಿಂಸೆ ಹಾಗೂ ಕೊಲೆ ಸುಲಿಗೆಯಲ್ಲಿ ತೊಡಗಲು ಜನರನ್ನು ಉದ್ರೇಕಿಸುತ್ತಿರುವದನ್ನು ಭಾರತ ಸರಕಾರವು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದೆ. ಆದರೆ ಈ ಬಗ್ಗೆ ಎರಡೂ ಸರಕಾರಗಳಲ್ಲಿ ಮಾತುಕತೆ ನಡೆದಿರುವದರಿಂದ ಹೆಚ್ಚಿನ ಚರ್ಚೆ ಸರಿಯಲ್ಲ ಎಂದು ಮುಂತಾಗಿ ಸಮಾಧಾನದ ಸಹನೆಯ ಮಾತು ಹೇಳಿದರು.

# * ಚಿತ್ರ ಸಮಾಚಾರ *

ಅ. ಭಾ. ಕಾಂ ಸಭೆಯ ಸಿದ್ಧತೆ: ಬರುವ ವಾರ ಮುಂಬಯಿಯಲ್ಲಿ ಕೂಡಲಿರುವ ಅ. ಭಾ. ಕಾಂಗ್ರೆಸ ಅಧಿವೇಶನದ ಭವ್ಯ ಮಂಟಪಕ್ಕೆ ಅಸ್ತಿವಾರ ಹಾಕುವದು. ಶ್ರೀ ಎಸ್. ಕೆ ಪಾಟೀಲರು (ಮುಂಬಯಿ ಪ್ರಾಂ. ಕಾಂ. ಅಧ್ಯಕ್ಷ) ತೆಂಗಿನಕಾಯಿ ಒಡೆದು ಊದುಬತ್ತಿ ಹಚ್ಚಿ ವಾಸ್ತುಪೂಜೆ ಮಾಡುತ್ತಿದ್ದಾರೆ

ಫೆಬ್ರುವರಿ ಕೊನೆಯಲ್ಲಿ ಕೊನೆಯ ಬ್ರಿಟಿಶ ದಂಡುಗಳು ಹಿಂದುಸ್ತಾನವನ್ನು ಬಿಟ್ಟು ಹೋದಾಗ ಮುಂಬಯಿ ಗವರ್ನರ ಸರ್ ಮಹಾರಾಜ ಸಿಂಗರು ಅವರನ್ನು ಬೀಳ್ಕೊಡುತ್ತಿರುವದು.

ಮುಂಬಯಿ "ಭಾರತದ್ವಾರ" ದಿಂದ ಕೊನೆಸಲ ಬ್ರಿಟಿಶ ದಂಡುಗಳ ನಿರ್ಗಮನ.

## ಹದಗೆಟ್ಟ ಹೈದರಾಬಾದ

[ ೧೧ನೆಯ ಪುಟದಿಂದ ]

ಶ್ರೀಮತಿ ಅರುಣಾ ಅವರು, ಹಿಂದುಸ್ತಾನ ಸರಕಾರವು ಶಸ್ತ್ರ ಬಲದಿಂದ ಹೈದರಾಬಾದವನ್ನು ದಮನಿಸುವ ಕಾಲ ಬಂದಿದೆಯೆಂದೂ ಈಗಿರುವ ಅನಿಶ್ಚಿತ ಪರಿಸ್ಥಿತಿಗಿಂತ ಯುದ್ಧವೇ ಮೇಲು ಎಂದೂ ರಜಕಾರರು ಯುದ್ಧ ಸಿದ್ಧತೆ ನಡೆಸಿವಾಗ ಸಂಧಾನ ನಿರರ್ಥಕವೆಂದೂ ಸ್ಪಷ್ಟೋಕ್ತಿಗಳನ್ನು ಆಡಿದರು. ಹೈದರಾಬಾದ ಶಿಷ್ಟಮಂಡಲವು ಎಡತಾಕುತ್ತ ಕಾಲಹರಣದ ಧೋರಣೆ ವಹಿಸಿದ್ದು ಕುಂಟ ಘಾತಕವಾಗಿದೆ ಎಂದು ಅವರ ಅಭಿಪ್ರಾಯ. ಹಿಂದುಸ್ತಾನ ಸರಕಾರವೇನನ್ನೇ ಮಾಡಲಿ. ಆದರೆ ಸಾಮ್ಯವಾದಿಗಳು ಸ್ವತಂತ್ರವಾಗಿ ಹೈದರಾಬಾದದಲ್ಲಿ ಹೋರಾಟ ಹೂಡುವದಾಗಿ ನಿರ್ಧರಿಸಿದ್ದಾರೆ ಎಂದು ಮೊದಲಾಗಿ ಹೇಳಿದರು.

### ನಿಜಾಮರನ್ನು ಸಿಂಹಾಸನದಿಂದ ಉರುಳಿಸಿರಿ

ಜಯಪ್ರಕಾಶ ನಾರಾಯಣರಂತೂ ತಾ. ೧೩ ರಂದು ಮದ್ರಾಸದಲ್ಲಿ ಸೇರಿದ ೨೫ ಸಾವಿರ ಜನರ ಪ್ರಚಂಡವಾದ ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತ, ಹೈದರಾಬಾದ ನಿಜಾಮರನ್ನು ಸಿಂಹಾಸನದಿಂದ ಉರುಳಿಸಿ ಅವರ ಸಂಸ್ಥಾನವನ್ನು ಹಿಂದುಸ್ತಾನದಲ್ಲಿ ಸೇರಿಸಿ ಮೂರು ಭಾಷಾವಾರ ಪ್ರಾಂತಗಳಲ್ಲಿ ಹಂಚಿಹಾಕಿಬಿಡುವದೇ ಯೋಗ್ಯವೆಂದು ಉದ್ಗಾರ ತೆಗೆದರು. ಹಿಂದುಸ್ತಾನ ಸರಕಾರವು ಮನಸ್ಸು ಮಾಡಿದರೆ ಹೈದರಾಬಾದವನ್ನು ಲೀಲಾಯಮಾನವಾಗಿ ಮಣಿಸಬಹುದು. ಆದರೆ ಹಿಂದುಸ್ತಾನ ಸರಕಾರವು ಯಾವದೇ ಧೋರಣದಿಂದ ಕ್ರಮ ಕೈಕೊಳ್ಳದಿದ್ದರೆ, ಉಳಿದವರು ಹೋರಾಡಲು ಸಿದ್ಧರಿದ್ದಾರೆಂದೂ ಸಾಮ್ಯವಾದಿಗಳಾದರು ಇದಕ್ಕೆ ನಡಕಟ್ಟಿದ್ದಾರೆಂದೂ ಎಲ್ಲ ಘಟನೆಗಳನ್ನೂ ತಾವು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನೋಡುತ್ತಿರುವದಾಗಿಯೂ ಶ್ರೀ ಜಯಪ್ರಕಾಶರು ಹೇಳಿದರು.

### ಜನರಲ್ ಭೋಸಲೆಯವರ ಗುಡುಗು

ಅಝಾದ ಸೈನ್ಯದ ಜನರಲ್ ಭೋಸಲೆಯವರು ಇಂಡಿಯನ್ ಪ್ರೆಸ್ ಸುದ್ದಿಗಾರರಿಗಿತ್ತ ಸಂದರ್ಶನದಲ್ಲಿ ತಾ ೧೩ ರಂದು ಹೀಗೆ ಗುಡುಗಿದರು:— ರಜಕಾರರ ಸದ್ದಡಗಿಸಲು ಅಝಾದ ಸೈನಿಕರು ಸಿದ್ಧರಿದ್ದಾರೆ. ಹಿಂದುಸ್ತಾನ ಸರಕಾರವು ನಮ್ಮ ಸಹಾಯ ಕೋರಬೇಕು. ಹಿಂದುಸ್ತಾನ ಸರಕಾರವು ಹೈದರಾಬಾದವನ್ನು ಒಂದು ವಾರದಲ್ಲಿ ಮಣಿಸಬಲ್ಲದು ಅಝಾದ ಸೈನಿಕರು ಭಾರತಮಾತೆಯ ರಕ್ಷಣೆಗಾಗಿ ಯಾವಾಗಲೂ ಸಿದ್ಧರಿದ್ದಾರೆ.

### ಸಾರ್ವತ್ರಿಕ ರೋಷ

ಹೀಗೆ ಎಲ್ಲಿ ನೋಡಿದಲ್ಲಿ ಎಲ್ಲ ಪಕ್ಷಸಂಗಡಗಳಲ್ಲಿ ಹೈದರಾಬಾದದಲ್ಲಿ ನಡೆದ ಅರಾಜಕ ಚಟುವಟಿಕೆಗಳ ಬಗ್ಗೆ ಸಾರ್ವತ್ರಿಕ ಅಸಂತೋಷ ಮತ್ತು ರೋಷ ಹಬ್ಬಿಹೋಗಿದೆ. ಹಿಂದುಸ್ತಾನ ಸರಕಾರದ ಸಹನೆ ಎಲ್ಲೂ ಕತ್ತರಿಸತೊಡಗಿದೆ. ಇದನ್ನು ಹಿಂದುಸ್ತಾನ ಸರಕಾರವು ಅಧಿಕೃತ ಅನಧಿಕೃತ ರೀತಿಗಳಿಂದ ಪತ್ರಿಕಾ ಕರ್ತರಿಗೆ ಕೊಟ್ಟ ಸಂದರ್ಶನಗಳಲ್ಲಿ ಮಹಾಶಾಸನ ಸಭೆಯ ಚರ್ಚೆಗಳಲ್ಲಿ ವ್ಯಕ್ತಪಡಿಸಿದೆ. ಇದನ್ನೆಲ್ಲ ನೋಡಿದರೆ ಈ ವಿಷಯದಲ್ಲಿ ಬೇಗ ಏನಾದರೊಂದು ನಿರ್ಧಾರವು ಆಗುವದೆಂಬ ಬಗ್ಗೆ ಸಂದೇಹವಿಲ್ಲ. ಇನ್ನಾದರೂ ನಿಜಾಮರಲ್ಲಿಯೂ ಪುಂಡಾಟಿಕೆ ನಡೆಸಿದ ರಜಕಾರ ಮುಖಂಡರಲ್ಲಿಯೂ ವಿವೇಕೋದಯವಾದೀತೆ ?

## ವ್ಯಾಪಾರ ಪ್ರಪಂಚ

### ಮುಂಬಯಿ ಪೇಟೆ ಧಾರಣೆ

ಮುಂಬಯಿ ತಾ. ೧೪

| | |
|---|---|
| **ಬಂಗಾರ** | |
| ತಯಾರಿ | ೧೧೫—೧೪—೦ |
| ತಯಾರಿ | ೧೧೫-೧೪-೦ |
| **ಬೆಳ್ಳಿ** | |
| ತಯಾರಿ | ೧೭೦—೬—೦ |
| ತಯಾರಿ | ೧೭೦—೧೨—೦ |
| ಚೇಂಬರ | ೧೭೦—೧೨—೦ |
| ಸಾವರಿನ | ೭೩—೮—೦ |
| **ಎಣ್ಣೆ ಕಾಳುಗಳು** | |
| ಶೇಂಗಾ | ೧೫೮—೧೨—೦ |
| ಹೊಸ ಬೆಳೆ | ೧೫೮-೧೨-೦ |
| ಅಗಸೆ | ೨೫—೧೨—೦ |
| ಅಗಸೆ ಎಣ್ಣೆ | ೧೫—೮—೦ |
| **ಟೆಕ್ಸಟಾಯಿಲ್ಸ** | |
| ಅಹಮ್ಮದಾಬಾದ ಅಡ್ವಾನ್ಸ | ೫೬೫-೦-೦ |
| ಮುಂಬಯಿ ಡಾಯಿಂಗ | ೧೧೨೦-೦-೦ |
| ಸೆಂಟ್ರಲ ಇಂಡಿಯಾ | ೩೩೬—೦—೦ |
| ಸೆಂಚುರಿ | ೫೦೦—೦—೦ |
| ಕುಲಾಬಾ ಲ್ಯಾಂಡ | ೧೮೦-೦-೦ |
| ಗೋಕಾಕ | ೩೩೭—೦—೦ |
| ಇಂಡಿಯನ್ ಬ್ಲೀಚಿಂಗ | ೧೭೦-೦-೦ |
| ಕೋಹಿನೂರು | ೬೪೮-೦-೦ |
| ಫೀನಿಕ್ಸ | ೪೫೫-೦-೦ |
| ಸೋಲಾಪುರ | ೫೯೫೦-೦-೦ |
| ಸಿಂಪ್ಲೆಕ್ಸ | ೨೪೩—೦—೦ |
| ಸ್ವದೇಶಿ | ೬೪೨-೦-೦ |
| ವಿಷ್ಣು | ೩೧೫—೦—೦ |
| ಟಾಟಾ ಪವರ | ೧೫೨೨—೮—೦ |
| ಟಾಟಾ ಹೈಡ್ರೊ | ೧೫೫—೦—೦ |
| ಟಾಟಾ ಸ್ಟೀಲ ಡೆಫರ್ಡ್ಸ | ೧೭೧೫-೦-೦ |
| ಟಾಟಾ ಸ್ಟೀಲ ಆರ್ಡಿನರಿ | ೩೪೪-೦-೦ |
| ಪ್ರಿಮಿಯರ ಕನ್‌ಸ್ಟ್ರಕ್ಶನ | ೨೧೦—೮—೦ |
| ಇಂಡಿಯನ ಆಯರ್ನ | ೩೧—೧೦—೦ |
| ಬರ್ಮಾ ಕಾರ್ಪೊರೇಶನ | ೩-೪-೦ |
| ಇಂಡಿಯನ್ ಕಾಪರ | ೨-೧೪-೦ |
| **ಸಿಮೆಂಟ್ಸ** | |
| ಅಸೋಸಿಯೇಟೆಡ್ ಸಿಮೆಂಟ್ಸ | ೧೭೪-೦-೦ |
| **ಇನ್ಶುರನ್ಸ** | |
| ನ್ಯೂ ಇಂಡಿಯಾ ಇನ್‌ಶುರನ್ಸ | ೭೪-೦-೦ |
| **ಬ್ಯಾಂಕುಗಳು** | |
| ಸೆಂಟ್ರಲ | ೮೬—೧೨—೦ |
| ಇಂಪಿರಿಯಲ (ಅಂಶತಃ) | ೧೨-೮-೦ |
| | ೨೦೪೦—೦—೦ |
| ಇಂಪೀರಿಯಲ (ಪೂರ್ಣ) | ೨೪೬-೮-೦ |
| ಇಂಡಿಯಾ | ೧೧೧—೦—೦ |

### ಶಿವಮೊಗ್ಗ

ತಾ. ೧೪

ಶಿವಮೊಗ್ಗೆ ಅಡಿಕೆಪೇಟೆಯ ಧಾರಣೆ ಮಣ ೧ ಕ್ಕೆ ಈರೀತಿ ಇದೆ—

| | |
|---|---|
| ದೇಶಾವರ ನಂ. ೧ ಮಣ ೧ ಕ್ಕೆ | ೨೩-೩೬ |
| ,, ,, ೨ | ೩೦-೩೫ |
| ,, ,, ೩ | ೨೫-೩೦ |
| ಬೆಟ್ಟೆ ವಂಶಿ | ೧೮—೨೦ |
| ರಾಶಾ ಇಲವು | ೩೨—೩೬ |
| ಬೆಟ್ಟೆ | ೧೪-೧೬ |

ಪೇಟೆ ಯಥಾಸ್ಥಿತಿ ಇದೆ. ಬೆಟ್ಟೆಗೆ ಗಿರಾಕಿ ಚನ್ನಾಗಿದ್ದು ದಕ್ಷಿಣ ಭಾರತದ ಬೇಡಿಕೆಹೆಚ್ಚುತ್ತಿದೆ.

---

ಇನ್ನೆರಡು ತಿಂಗಳಲ್ಲಿ ಜರುಗಲಿರುವ ದಕ್ಷಿಣ ಆಫ್ರಿಕನ್ ಚುನಾವಣೆಗಳಲ್ಲಿ ವರ್ಣದ್ವೇಷವನ್ನು ಸಾಧಿಸುವ ಯೋಜನೆಗಳೇ ವಿವಿಧ ಪಕ್ಷಗಳ ಚುನಾವಣೆಯ ಮಂತ್ರಗಳಾಗಿಬಿಟ್ಟವೆ. ಈ ಚುನಾವಣೆಗಳಲ್ಲಿ ಬಿಳಿಯರಿಗೆ ಮಾತ್ರ ಮತಾಧಿಕಾರವುಂಟು. ವರ್ಣದ್ವೇಷದಲ್ಲಿ ಎಲ್ಲರನ್ನು ಮಿಗಿಸುವ ಡಾ. ಮಲಾನರ ರಾಷ್ಟ್ರೀಯ ಪಕ್ಷದ ಚುನಾವಣೆ ಘೋಷಣೆಯಲ್ಲಿ ಬಿಳಿಯರಿಗೆ ಆ ಪಕ್ಷ ಕೊಡಮಾಡಿದ ದಾನಗಳಲ್ಲಿ ಕೆಲವು ಇಂತಿವೆ:

ಹಿಂದಿಯರನ್ನು ಆದಷ್ಟು ಬೇಗ ಓಡಿಸುವದು ಮತ್ತು ಅವರಿದ್ದಷ್ಟು ಕಾಲ ಅವರನ್ನು ನಿರ್ದಿಷ್ಟ ಸ್ಥಳಗಳಲ್ಲಿ ಕಟ್ಟಿಹಾಕಿದಂತೆ ಮಾಡುವದು.

ಆಫ್ರಿಕೆಯ ಮೂಲನಿವಾಸಿಗಳ ಕೂಲಿದರವನ್ನಿಳಿಸಿ ಚಿನ್ನದ ಗಣಿಗಳ ಬಿಳಿಯ ಒಡೆಯರಿಗೆ ಹೆಚ್ಚು ಲಾಭದೊರಕಿಸಿಕೊಡುವದು ಇತ್ಯಾದಿ.

---

## ಧಾರವಾಡ

ಮಹಾತ್ಮರ ಮರಣಾನಂತರ ನಡೆದ ಗಲಭೆಗಳ ಸಂಬಂಧದಲ್ಲಿ ಪರಿಶೀಲನೆ ನಡೆಸಲು ಕರ್ನಾಟಕ ಪ್ರಾಂತೀಯ ಕಾಂಗ್ರೆಸ ಸಮಿತಿಯವರು ಶ್ರೀ ಅಂದಾನೆಪ್ಪ ದೊಡ್ಡಮೇಟಿ (ನಿಮಂತ್ರಕರು) ಜನಾಬ ಶೇಖ ಸಾಹೇಬ, ಡಾ. ಬಿ. ಎಸ್. ಕುಲಕರ್ಣಿ, ಪಂಚಾಕ್ಷರಪ್ಪ ಅಂಗಡಿ ಮತ್ತು ಶ್ರೀ ಬಿ. ಎನ್. ಮುನವಳ್ಳಿಯವರ ಸಮಿತಿಯೊಂದನ್ನು ನೇಮಿಸಿದ್ದಾರೆ.

ಹುಬ್ಬಳ್ಳಿಯ ವ್ಯಾಪಾರಸ್ಥರಾದ ಶ್ರೀ ಬಿ. ಎಫ್. ಬ್ಯಾಳಿಯವರು ಬಡವರಿಗೆ ಒಂದು ಸಾವಿರ ಚೀಲ ಜೋಳವನ್ನು ಮೂಲ ಬೆಲೆಗೆ ಕೊಡಲು ಜಿಲ್ಲಾ ಕಾಂಗ್ರೆಸ ಸಮಿತಿಯವರ ಬಿನ್ನಹದ ಮೇರೆಗೆ ಒಪ್ಪಿ ಮೊನ್ನೆ ಶನಿವಾರ ೩೦೦ ಚೀಲ ಮಾರಿದರು.

ಶಿಗ್ಗಾವಿಯಲ್ಲಿ ಜಿಲ್ಲಾ ನ್ಯಾಯಾಧೀಶ ಶ್ರೀ ಶಿಂಧೆಯವರ ಅಧ್ಯಕ್ಷತೆಯಲ್ಲಿ ಸೇರಿದ್ದ ಸಭೆಯಲ್ಲಿ ಶ್ರೀ ಶಂಕರಗೌಡ ಬಹಾದ್ದೂರ ದೇಸಾಯರು ಸೇವಾಮಂದಿರದ ಒಂದು ವರ್ಷದ ಖರ್ಚನ್ನು ವಹಿಸುವದಾಗಿ ಸಾರಿದರು. ಈ ಸೇವಾಮಂದಿರದ ವಾರ್ಷಿಕ ವೆಚ್ಚ ಸುಮಾರು ೮-೧೦ ಸಾವಿರ ರೂ ಬರುವದು.

ಶ್ರೀ ಆರ್. ಎಸ್. ಪ್ರಯಾಗ ಇವರು ಮುಂಬಯಿ ವಿಶ್ವವಿದ್ಯಾಲಯದ ಈ ವರುಷದ ಬಿ. ಎಸ್ ಸಿ. ಟೆಕ್ನಾಲಜಿ ಪರೀಕ್ಷೆಯಲ್ಲಿ ಒಂದನೇ ವರ್ಗದಲ್ಲಿ ಪಾಸಾದ ಒಬ್ಬರೇ ಒಬ್ಬ ಕನ್ನಡಿಗರು: ಜವಳಿ ಉದ್ಯೋಗದಲ್ಲಿ ರಸಾಯನ ಶಾಸ್ತ್ರದಲ್ಲಿ ಪಿ ಎಚ್ ಡಿ. ಪದವಿ ಸಂಪಾದಿಸಲು ಪರದೇಶಕ್ಕೆ ಪ್ರಯಾಣ ಬೆಳೆಸಲಿರುವರು. ಇವರು ನಿವೃತ್ತ ಡೆ. ಡಾಯರೆಕ್ಟರ ಶ್ರೀ ಪ್ರಯಾಗರ ಮಕ್ಕಳು.

೧೦ ದಿನಗಳ ವರೆಗೆ ಹುಬ್ಬಳ್ಳಿಯಲ್ಲಿ ಬೀಡು ಬಿಟ್ಟಿದ್ದ ಹ. ಭ. ಪ. ಸೌ. ಗಯಾಬಾಯಿ ಮನಮಾಡಕರ ಇವರು ೧೧ ನೇ ತಾರೀಖು ಸಾಯಂಕಾಲ ಶಿಗ್ಗಾವಿ ಮಾರ್ಗವಾಗಿ ರಾಮೇಶ್ವರಕ್ಕೆ ತೆರಳಿದರು. ಅವರು ರಾಮೇಶ್ವರದಿಂದ ಮರಳಿ ಕಾಶಿಗೆ ಹೋಗಿ ಅಲ್ಲಿ ೪೧ ದಿನಗಳ ಮಹಾಯಜ್ಞವನ್ನು ಮಾಡಲಿರುವರು.

ಹುಬ್ಬಳ್ಳಿಯಲ್ಲಿ ನವನಿಕೇತನ ಕೋಆಪರೇಟಿವ ಹೌಸಿಂಗ ಸೊಸಾಯಿಟಿ ಎಂಬ ಸಂಸ್ಥೆ ರಜಿಸ್ಟರಾಗಿದ್ದು ಅದರ ಮೊದಲನೆ ಸಭೆ ೧೧ ನೇ ತಾರೀಖು ಸಾಯಂಕಾಲ ಸಂಘದ ಕಚೇರಿಯಲ್ಲಿ ಸೇರಿತ್ತು. ಸಂಘವು ಶ್ರೀ ವಸಂತರಾವ ಚಿಟಗುಪ್ಪಿ ಇವರ ೩೦ ಎಕರೆ ಭೂಮಿಯನ್ನು ಪಡೆದಿದ್ದು ಅಲ್ಲಿ ೮೦ ಮನೆಗಳನ್ನು ಕಟ್ಟಿಸಲಿರುವದು. ಇದೀಗ ಕಾರ್ಯಕಾರಿ ಮಂಡಲದ ಆಯ್ಕೆಯಾಗಿದ್ದು ಶ್ರೀ ವೆಂ. ಭೀ. ನಾಯಕರು ಚೆಅರಮನ್, ಶ್ರೀ ಬಾಬೂರಾವ ಗೋರೆ ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟಿದ್ದಾರೆ. ಸಂಘವು ಮುಂದಿನ ಕೆಲಸವನ್ನು ಇಷ್ಟರಲ್ಲಿ ಪ್ರಾರಂಭಿಸಲಿದೆ.

ಆಹಾರ ಬೆಲೆಗಳು ಏರಿದ್ದರಿಂದ ಧಾರವಾಡ ಜಿಲ್ಲೆಯಲ್ಲಿ ಯೋಗ್ಯ ದರದ ಅಂಗಡಿಗಳನ್ನು ಜಿಲ್ಲಾ, ತಾಲೂಕು ಪೇಠಾ ಸ್ಥಳಗಳಲ್ಲಿ ಕೂಡಲೆ ತೆರೆಯಬೇಕೆಂದು ನಿರ್ಧರಿಸಲಾಗಿದೆ. ಸದ್ಯದಲ್ಲಿ ಸರಕಾರೀ ವಖಾರಗಳಲ್ಲಿ ಗೋವಿನ ಜೋಳ ಮಾತ್ರ ಕೊಡುವ ಏರ್ಪಾಡು ಮಾಡಿದೆ. ಕಾರ್ಡ ಪದ್ಧತಿಯನ್ನು ಅನುಸರಿಸುವ ಯೋಜನೆಯೇನು ಇಲ್ಲ ಮುಂತಾಗಿ ಕಲೆಕ್ಟರರು ಪ್ರಕಟಿಸಿದ್ದಾರೆ.

ಹುಬ್ಬಳ್ಳಿಯ ಕ್ರಿಶ್ಚನ್ ಕಾಲಿನಿಯಲ್ಲಿಯ ಒಂದು ಮನೆಯಲ್ಲಿ ವಾಸಿಸುತ್ತಿದ್ದ ಸಿಂಧ ನಿರಾಶ್ರಿತರ ಕುಟುಂಬವೊಂದು ೭ ನೇ ತಾರೀಕಿನ ದಿನ ಸುಲಿಯಲ್ಪಟ್ಟಿತು. ಅಂದು ರಾತ್ರಿ ಆ ಮನೆಗೆ ಕನ್ನಹಾಕಿ ೫-೬ ಸಾವಿರ ರೂಪಾಯಿಗಳ ಒಸ್ತ ಒಡವೆ ಮುಂತಾದವುಗಳು ಅಪಹರಿಸಲ್ಪಟ್ಟವು. ಇತ್ತೀಚೆ ಇಂಥ ಚಿಕ್ಕಪುಟ್ಟ ಕಳವುಗಳು ಹೆಚ್ಚಿಗೆ ಆಗಹತ್ತಿವೆ.

## ಬಳ್ಳಾರಿ

ಬಳ್ಳಾರಿಯಲ್ಲಿ ಪೂರ್ವ ಕರ್ನಾಟಕ ಏಕೀಕರಣ ಸಂಘ ಹಾಗು ಜಿಲ್ಲಾ ಕರ್ನಾಟಕ ಸಂಘದ ಕಚೇರಿಯಲ್ಲಿ ಕರ್ನಾಟಕ ವಾಚನಾಲಯವೂ ಗ್ರಂಥಾಲಯವೂ ತೆರೆಯಲಾಗಿದೆ ಪುರ ಜನರು ಇದರ ಲಾಭ ಪಡೆಯಬೇಕಾಗಿ ಕೋರಲಾಗಿದೆ.

ಉರುವಕೊಂಡದ ಮಹಾಸ್ವಾಮಿಗಳು ಬಳ್ಳಾರಿ ಜಿಲ್ಲಾ ಪೂರ್ವ ಭಾಗದಲ್ಲಿ ಗಡಿ ತಾಲೂಕುಗಳಾದ ಆದ್ವಾನಿ ಆಲೂರುಗಳ ಮುಖ್ಯವಾದ ಗ್ರಾಮಗಳಿಗೆ ಎಪ್ರಿಲ ೧೮ ರಿಂದ ಸಂಚಾರವನ್ನಿಟ್ಟುಕೊಂಡಿದ್ದಾರೆ. ಏಕೀಕರಣ ಚಳವಳಿಯನ್ನು ಬಲಪಡಿಸಲು ಕಾರ್ಯಕ್ರಮಗಳನ್ನಿಟ್ಟುಕೊಂಡಿದ್ದಾರೆ. ಶ್ರೀ ಜೋಳದರಾಶಿಯವರು ಮತ್ತು ಇನ್ನಿತರರು ಅವರ ಸಂಗಡ ಹೋಗುವರು.

ಹೊಸಪೇಟೆಯಲ್ಲಿ ೧೦ ನೇ ತಾರೀಖು ರಾತ್ರಿ ೩೧ ಗುಡಿಸಲುಗಳಿಗೆ ಬೆಂಕಿ ಬಿದ್ದು ಅವೆಲ್ಲ ಸುಟ್ಟು ಹೋದವು. ೨೦ ಸಾವಿರ ರೂಪಾಯಿ ಹಾನಿಯಾಗಿದೆ ಮುನಿಸಿಪಾಲಟಿಯವರು ಅಗ್ನಿಶಾಮಕ ಮೋಟರು ಇಟ್ಟಿಲ್ಲಾದ್ದರಿಂದ ಪ್ರಾಜೆಕ್ಟನಲ್ಲಿದ್ದ ಲಾರಿಗಳಲ್ಲಿ ನೀರು ತಂದು ಬೆಂಕಿ ಆರಿಸಲಾಯಿತು.

# ಕರ್ನಾಟಕ

## ಬೆಳಗಾವಿ

ರಾಷ್ಟ್ರೀಯ ಸಪ್ತಾಹದ ಪ್ರಾರಂಭದ ದಿನ ಅಂದರೆ ಎಪ್ರಿಲ ೬ ಕ್ಕೆ ಬೆಳಗಾವಿ ಜಿಲ್ಲಾ ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿ ಸಮಿತಿಯು ರಚಿಸಲ್ಪಟ್ಟಿತು. ಬೇರೆ ಬೇರೆ ತಾಲೂಕುಗಳಿಗೆ ನಿಮಂತ್ರಕರನ್ನು ಆರಿಸಲಾಯಿತು. ಈ ಸಮಿತಿಯ ಮೊದಲನೆ ಸಭೆ ೧೩ ಕ್ಕೆ ಕೂಡಿ ಮುಂದಿನ ಕಾರ್ಯಕ್ರಮ ಗೊತ್ತು ಮಾಡಲಾಯಿತು.

ಮುಂಬಯಿ ಸರಕಾರದವರು ಬೆಳಗಾವಿಯಲ್ಲಿಯ ಸಾರ್ವಜನಿಕ ವಾಚನಾಲಯಕ್ಕೆ ನಾಲ್ಕು ರೂಪಾಯಿಗಳ ಸಹಾಯ ಧನವನ್ನು ಕೊಡಲು ನಿರ್ಧರಿಸಿದ್ದರಿಂದ ಅವರ ಇಚ್ಛೆಯಂತೆ ವಾಚನಾಲಯದವರು ವಾಚಕರಿಗೆ ಪುಕ್ಕಟೆ ವರ್ತಮಾನ ಪತ್ರಗಳನ್ನು ಕೊಡಲು ನಿರ್ಧರಿಸಿದ್ದಾರೆ. ಉಗಾದಿ ಪ್ರತಿಪದೆಯ ದಿನ ಜಿಲ್ಲಾ ನ್ಯಾಯಾಧೀಶ ಶ್ರೀ ಎಂ. ಎಸ್. ಪಾಟೀಲರ ಹಸ್ತದಿಂದ ಈ ಪುಕ್ಕಟೆ ವಾಚನಾಲಯ ಪ್ರಾರಂಭವಾಯಿತು. ಪಾಟೀಲರು ತನ್ನ ಭಾಷಣದಲ್ಲಿ ವಾಚಕರ ಅನುಕೂಲತೆಗಾಗಿ ವಾಚನಾಲಯದಲ್ಲಿ ರೇಡಿಯೋವನ್ನೂ ಇಡಬೇಕೆಂದು ಸೂಚಿಸಿದರು. ಶ್ರೀ ಬೆಳವಿಯವರು ಪ್ರಾಸ್ತಾವಿಕ ಭಾಷಣ ಮಾಡಿದರು. ಶ್ರೀ ಗೋಖಲೆ ಕೇಶವರಾಯರು ವಂದನೆಗಳನ್ನು ಸಮರ್ಪಿಸಿದರು.

ಬೆಳಗಾವಿಯಿಂದ ಹೊರಡುತಿದ್ದ ಮಧುರವಾಣಿ ಎಂಬ ಸಂಸ್ಕೃತ ಮಾಸ ಪತ್ರಿಕೆಯು ಬರುವ ಅಕ್ಷಯ್ಯ ತೃತಿಯೆಯಿಂದ ವಾರಪತ್ರಿಕೆಯಾಗಿ ಹೊರಡುವದು. ಈ ಅಕ್ಷಯ್ಯ ತೃತಿಯೆಗೆ ಪತ್ರಿಕೆಗೆ ಹನ್ನೆರಡು ವರುಷ ತುಂಬುತಿದ್ದು ಪತ್ರಿಕೆಯ ವಸಂತಾಂಕದ ಪ್ರಕಾಶನ ಸಮಾರಂಭ ಅಂದು ನೆರವೇರುವದು.

## ವಿಜಾಪುರ

ಮುಧೋಳ ಸಂಸ್ಥಾನ ಮುಂಬಯಿ ಪ್ರಾಂತದಲ್ಲಿ ವಿಲೀನವಾಗಿದೆಯಷ್ಟೇ. ಅಲ್ಲಿದ್ದ ಹಾಯಸ್ಕೂಲನ್ನು ಸರಕಾರ ನಡೆಯಿಸಿಕೊಂಡು ಹೋಗಲಾರದೆಂದೂ ಖಾಸಗಿ ಸಂಸ್ಥೆಗಳು ಬೇಕಾದರೆ ಅದನ್ನು ನಡೆಸಬಹುದೆಂದೂ ಮುಂಬಯಿ ಸರಕಾರದವರು ಈಗ ತಿಳಿಸಿದ್ದರಿಂದ ಇಲ್ಲಿ ಶಿಕ್ಷಣ ಪ್ರಸಾರ ಮಂಡಲವೆಂಬ ಸಂಸ್ಥೆ ಸ್ಥಾಪಿತವಾಗಿದೆ. ಶ್ರೀ ಭೀಮರಾವ ಟೆಂಕಸಾಲಿಯವರು ಮಂಡಳದ ಅಧ್ಯಕ್ಷರು, ಶ್ರೀ ಆರ್. ಜಿ ಬೆಳಗಲಿ ಮತ್ತು ಎಸ್. ಬಿ. ಪಾಟೀಲರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟಿರುವರು ಹಾಯಸ್ಕೂಲಿಗಾಗಿ ನಿಧಿ ಸಂಗ್ರಹ ಕಾರ್ಯ ನಡೆದಿದೆ.

ಒಕ್ಕಲಿಗರಿಗೆ ನೆರವಾಗಬೇಕೆಂದು ಸರಕಾರದವರು ಈ ಮೊದಲು ಪೂರೈಸುತಿದ್ದ ಒಕ್ಕಲತನದ ಉಪಕರಣಗಳನ್ನು ಮೊದಲಿನ ಬೆಲೆ ಕಡಮೆ ಮಾಡಿ ಮಾರಲು ನಿರ್ಧರಿಸಿದ್ದಾರೆ. ರೈತ ಬಾಂಧವರು ಇದರ ಲಾಭ ಪಡೆಯಬೇಕೆಂದು ವಿಜಾಪುರ ಜಿಲ್ಲಾ ಒಕ್ಕಲತನ ಅಧಿಕಾರಿಗಳು ವಿನಂತಿಸುತ್ತಾರೆ. ಭಾವಿ ಮುಂತಾದವುಗಳಿಂದ ನೀರು ತೆಗೆದುಕೊಳ್ಳುವ ಉಪಕರಣಗಳನ್ನೂ ಕೊಡಲಾಗುವದೆಂದು ಪ್ರಸಿದ್ಧಿಸಲಾಗಿದೆ.

ಸರಕಾರದವರು ಕಚ್ಚಾ ರೇಶ್ಮಿಯ ಮೇಲೆ ಹಾಗು ರೇಶ್ಮಿ ಕೂಡಿದ ಬಟ್ಟೆಯ ಮೇಲೆ ಕರ ಹೇರುತ್ತಾರೆ. ಇದರಿಂದ ರೇಶ್ಮಿಯ ಮೇಲೆ ಎರಡು ಸಲ ಮಾರಾಟ ಕರ ಹೇರಿದಂತಾಗುತ್ತದೆ. ಇದರಿಂದ ಬಡ ನೇಕಾರನ ಮಾಲು ತುಟ್ಟಿಯಾಗಿ ಅದು ಮಾರಾಟವಾಗದೆ ಹಾನಿಗೊಳಗಾಗುತ್ತಾನೆ. ಅದುದರಿಂದ ರೇಶ್ಮಿಯಿಂದ ತಯಾರಾದ ಮಾಲಿಗೆ ಮಾರಾಟಕರ ಹೇರಬಾರದೆಂದು ವಿಜಾಪುರ ಜಿಲ್ಲಾ ಔದ್ಯೋಗಿಕ ಸಂಘದವರು ಸರಕಾರಕ್ಕೆ ಕೇಳಿಕೊಳ್ಳುವ ಗೊತ್ತುವಳಿಯನ್ನು ಪಾಸು ಮಾಡಿರುವರು

## ದಕ್ಷಿಣ ಕನ್ನಡ

ಕಮ್ಯುನಿಸ್ಟ ಚಟುವಟಿಕೆಗಳಿಗೆ ಸಂಬಂಧಿಸಿದರೆಂಬ ಆರೋಪದ ಮೇಲೆ ಉಡುಪಿಯ ಕೃಷ್ಣ ಮನಿಯಾನಿ, ಅಬ್ದುಲ್ ರಹೀಮದಾಸ, ಸೇರಿಗುರವಾ, ಪೂಲಿಜ್ಯಾರಿ ಮತ್ತು ಬೆಪಿಕೆ ಎಂಬುವವರನ್ನು ಪೋಲೀಸರು ೭ ಕ್ಕೆ ಬಂಧಿಸಿದ್ದಾರೆ. ಬೀಡೀ ಕೂಲಿಕಾರ ಮತ್ತು ನೇಕಾರ ಸಂಘಗಳ ಕಚೇರಿಗಳ ಝಡತಿ ಮಾಡಿ ಕೆಲವು ಸಾಮಾನುಗಳನ್ನು ಒಯ್ದಿರುವರು.

## ಉತ್ತರ ಕನ್ನಡ

ಮಳೆಗಾಲದಲ್ಲಿ ಮಾರಾಟಕ್ಕಾಗಿ ಧಾನ್ಯ ಸಂಗ್ರಹ ಮಾಡಲು ಒಪ್ಪುವ ವ್ಯಾಪಾರಸ್ಥರಿಗೆ ಸಾಲಕೊಡುವ ಮುಂಬಯಿ ಸರಕಾರದ ಯೋಜನೆಯನ್ನು ಜಿಲ್ಲಾ ಕಲೆಕ್ಟರರು ಸುದ್ದಿಗಾರರ ಸಭೆಯಲ್ಲಿ ತಿಳಿಸಿ ಹೇಳಿದರು. ಈಗ ಜಿಲ್ಲೆಯಲ್ಲಿ ಇರುವ ಮತ್ತು ಮುಂದೆ ಬರಬಹುದಾಗಿರುವ ಧಾನ್ಯ ಲೆಕ್ಕಕ್ಕೆ ಹಿಡಿದರೆ ಮಳೆಗಾಲ ಮುಗಿವ ವರೆಗೆ ಧಾನ್ಯ ಸಾಕಾಗಬಹುದೆಂದೂ ಅವರು ಹೇಳಿದರು. ಏರುತಿರುವ ಬೆಲೆಗಳನ್ನು ತಗ್ಗಿಸಲು ತಾಲೂಕಿನ ದೊಡ್ಡ ಊರುಗಳಲ್ಲೆಲ್ಲ ಅಗ್ಗದರದ ಅಂಗಡಿಗಳನ್ನು ತೆರೆಯಲಾಗುವದೆಂದು ಅವರು ಹೇಳಿದರು.

ಉತ್ತರ ಕನ್ನಡ ಜಿಲ್ಲಾ ಬೋರ್ಡಿನ ಅಧಿಕಾರಾವಧಿಯನ್ನು ೧೧-೭-೪೮ ರಿಂದ ನಾಲ್ಕು ತಿಂಗಳ ಬೆಳಿಸಲಾಗಿದೆ. ಪ್ರೌಢಮತದಾನ ಪದ್ಧತಿಯ ಪ್ರಕಾರ ಬೋರ್ಡಿನ ರಚನೆಯ ಬಗೆಗೆ ಆಜ್ಞೆ ಬಂದಿಲ್ಲ ಮತ್ತು ಮಳೆಗಾಲದಲ್ಲಿ ಚುನಾವಣೆಗಳನ್ನು ಹೂಡುವದು ಸಾಧ್ಯವಾಗಲಾರದಾದ್ದರಿಂದ ಹೀಗೆ ಮಾಡಲಾಗಿದೆ.

ಕೇಂದ್ರ ಅಬಕಾರಿ ನೌಕರರ ಪ್ರಾಂತೀಯ ಸಂಘದ ನಿರ್ಣಯದಂತೆ ಉತ್ತರ ಕನ್ನಡ ಜಿಲ್ಲೆಯ ಕೇಂದ್ರ ಅಬಕಾರಿ ಸಿಬ್ಬಂದಿಯವರ ೧೫ ನೇ ತಾರೀಕಿನಿಂದ ಸಂಪು ಹೂಡುವವರಿದ್ದಾರೆ. ಈ ಸಂಧಿಯ ದುರ್ಲಾಭ ಪಡೆದು ಸುಂಕ ತಪ್ಪಿಸಿ ಸಾಮಾನು ಮಾರಲು ಅನೇಕ ವ್ಯಾಪಾರಿಗಳು ತಯಾರಿದ್ದಾರೆಂದು ತಿಳಿಯುತ್ತದೆ.

ಹುಲೇಕಲ್ಲದಲ್ಲಿಯ ಶ್ರೀ ಗೋಪಾಲಕೃಷ್ಣ ದೇವರ ರಥೋತ್ಸವ ಕಾರ್ಯಕ್ರಮ ೧೩ ನೇ ತಾರೀಕಿನಿಂದ ನಡೆಯಿತು. ೧೪ ಕ್ಕೆ ಬ್ರಹ್ಮೋತ್ಸವದ ದಿನ ಮುಸಲ್ಮಾನ ಬಾಂಧವರು ಖುದಾದೋಸ್ತ ಎಂಬ ನಾಟಕವನ್ನಭಿನಯಿಸಿ ಈ ಉತ್ಸವದಲ್ಲಿ ಭಾಗವಹಿಸಿದ್ದರು.

---

ಇದೇ ೨೬ ಮತ್ತು ೨೭ ಕ್ಕೆ ಕರೆದ ತ್ರಿಪಕ್ಷೀಯ ಪರಿಷತ್ತಿನಲ್ಲಿ ಮೈಸೂರು ಸಂಸ್ಥಾನದ ಔದ್ಯೋಗಿಕ ಧೋರಣವನ್ನು ನಿರ್ಧರಿಸಲಾಗುವದು. ಹಿಂದುಸ್ತಾನ ಸರಕಾರದ ಔದ್ಯೋಗಿಕ ಧೋರಣವನ್ನು ಅನುಸರಿಸಿಯೆ ಇದನ್ನು ನಿರ್ಧರಿಸಲಾಗುವದೆಂದು ಮುಖ್ಯ ಮಂತ್ರಿಗಳು ಹೇಳಿದರು.

ಮೈಸೂರಿನ ನಂಜುಂಡರಾವ ಎಂಬವರು ತಮ್ಮ ಪತ್ನಿಯ ನಡೆತೆಯ ಬಗ್ಗೆ ಸಂಶಯ ಹೊಂದಿ ಅವಳ ಕೊಲೆಗೆಯತ್ನಿಸಿದರೆಂದು ೪ ವರ್ಷ ಕಠಿನ ಶಿಕ್ಷೆಗೆ ಗುರಿಯಾದರು.

ಮೈಸೂರಲ್ಲಿ ಲಾ ಕಾಲೇಜೊಂದನ್ನು ಇದೇ ವರುಷದಿಂದ ಪ್ರಾರಂಭಿಸಲಾಗುವದೆಂದು ಕಾಯದೆ ಮಂತ್ರಿಗಳು ಹೇಳಿದರು.

---

ಆರೋಗ್ಯ ಮಂತ್ರಿಗಳಾದ ಶ್ರೀ. ಎ. ಬಿ. ಶೆಟ್ಟಿಯವರು ೭ನೇ ತಾರೀಕಿಗೆ ಪತ್ರಿಕಾ ಪ್ರತಿನಿಧಿಗಳನ್ನು ಕಂಡು ವಿಚಾರ ವಿನಿಮಯ ಮಾಡಿದರು. ಜಿಲ್ಲೆಯ ಆಹಾರ ಪರಿಸ್ಥಿತಿ ಉಳಿತಾಯದ್ದೆಂದು ಸರಕಾರ ಭಾವಿಸಿದೆ. ಸೀದಾ ಪದ್ಧತಿಯನ್ನು ನಿಲ್ಲಿಸಿದ ಭಾಗದಲ್ಲಿ ಪರಿಹಾರ ಅಂಗಡಿಗಳನ್ನು ತೆರೆಯಲಾಗಿದೆ ಎಂದು ಮುಂತಾಗಿ ಹೇಳಿದರು.

ಜಿಲ್ಲೆಯಲ್ಲಿ ಮಲೇರಿಯಾ ನಿವಾರಣ ಕೇಂದ್ರವನ್ನು ಪುತ್ತೂರು ತಾಲೂಕಿನಲ್ಲಿ ತೆರೆಯಲಾಗಿದೆ. ಹಳ್ಳಿ ಪ್ರದೇಶಗಳಿಗೆ ತೆರೆಯಲಾಗಿದ್ದ ಆಸ್ಪತ್ರೆಗಳನ್ನು ಡಾಕ್ಟರರ ಅಭಾವದ ಮೂಲಕ ತೆರೆಯಲಾಗಲಿಲ್ಲ. ಮಂಗಳೂರಿನ ಕಂಕನಾಡಿಯಲ್ಲಿರುವ ಕುಷ್ಟರೋಗಿಗಳು ಆಸ್ಪತ್ರೆಯ ವಿಸ್ತರಣಕ್ಕೆ ೪೮ ಸಾವಿರ ರೂಪಾಯಿ ಸರಕಾರ ಧನಸಹಾಯ ನೀಡಿದೆಯೆಂದೂ ಮಂತ್ರಿಗಳು ಹೇಳಿದರು.

ನ್ಯಾಶನಲ್ ಹಾಯವೇಜದವರು ಕನ್ಯಾಕುಮಾರಿಯಿಂದ ಮುಂಬೈ ವರೆಗಿನ ರಸ್ತೆಯನ್ನು ತಾವೇ ಮಾಡುವವರಿದ್ದು ಮದ್ರಾಸ ಸರಕಾರ ಈ ಜಿಲ್ಲೆಯಲ್ಲಿ ೪೮-೪೯ರಲ್ಲಿ ಸಿರಿಯಾ ಅಣೆಕಟ್ಟು ಗುರುಪುರ ಅಣೆಕಟ್ಟು ಕುಳೂರು ಸೇತುವೆ ಮುಂತಾದ ದೊಡ್ಡ ಕೆಲಸಗಳನ್ನು ಪೂರೈಸುವರೆಂದು ಆರೋಗ್ಯ ಮಂತ್ರಿಗಳು ಪತ್ರಿಕಾ ಪ್ರತಿನಿಧಿಗಳ ಸಭೆಯಲ್ಲಿ ಹೇಳಿದರು.

## ಕನ್ನಡ ಸಂಸ್ಥಾನ

ಸಾವಂತವಾಡಿ ಮಹಾರಾಜರ ಅಪ್ತ ಕಾರ್ಯದರ್ಶಿಗಳಾದ ಡಾ. ಕರ್ಣಿಕ ಮತ್ತು ಪೋಲೀಸ ಅಧಿಕಾರಿಗಳಾದ ಶೇಖರ ಸುಲ್ಮೈಮಾನರನ್ನು ಸಾರ್ವಜನಿಕ ಸುರಕ್ಷಿತತೆ ಕಾಯಿದೆಯನ್ವಯ ಬಂಧಿಸಲಾಗಿದೆ. ಶೇಖ ಸುಲೇಮಾನರು ಲಂಚಗುಳಿಗಳೆಂದು ಮತ್ತು ಡಾ. ಕರ್ಣಿಕರು ಮಹಾರಾಜರನ್ನು ಕೈಗೊಂಬೆಗಳನ್ನಾಗಿಸಿಕೊಂಡು ಅನೇಕ ಪ್ರಜಾದ್ರೋಹಿ ಕಾರ್ಯಗಳನ್ನೆಸಗಿದರೆಂದು ಆರೋಪಿಸಲಾಗುತ್ತದೆ.

ಭದ್ರಾವತಿ ಅಥವಾ ತಾಳಗುಪ್ಪದಲ್ಲಿ ಒಂದು ವಿಮಾನ ನಿಲ್ದಾಣವನ್ನು ಕಟ್ಟಲಾಗುವದೆಂದು ತಿಳಿಯುತ್ತದೆ. ಭದ್ರಾವತಿಯಲ್ಲಿ ಕಟ್ಟಲ್ಪಡುವ ವಿಮಾನ ನಿಲ್ದಾಣಕ್ಕೆ ೨೦೫ ಸಾವಿರ ರೂಪಾಯಿ ಜೋಗದ ವಿದ್ಯುತ್‌ಸ್ಥಾನದ ಕೇಂದ್ರದ ಬಳಿಯಲ್ಲಿ ತಾಳಗುಪ್ಪದಲ್ಲಿ ಕಟ್ಟಲ್ಪಡುವ ವಿಮಾನ ನಿಲ್ದಾಣಕ್ಕೆ ೨೨೫ ಸಾವಿರ ರೂಪಾಯಿ ವೆಚ್ಚವಾಗಬಹುದೆಂದು ಅಂದಾಜು. ತಜ್ಞರ ಅಭಿಪ್ರಾಯ ಕೇಳಿಕೊಂಡು ಮುಂದಿನ ಕ್ರಮಕ್ಕೆ ಕೈಹಾಕಲಾಗುವದೆಂದು ತಿಳಿಯುತ್ತದೆ.

ಇಚಲಕರಂಜಿ ಜಾಗೀರಿಗೆ ದತ್ತಕ ಪುತ್ರನೇ ಬಾಧ್ಯಸ್ಥನೆಂದು ಹಿಂದುಸ್ತಾನ ಸರಕಾರದ ಸಂಸ್ಥಾನ ಖಾತೆಯು ವಿಧಿಸಿದೆಯೆಂದು ತಿಳಿಯುತ್ತದೆ. ಕೊಲ್ಹಾಪುರ ಮಹಾರಾಜರು ರಾಜಧಾನಿಗೆ ಮರಳಿ ಬಂದ ಬಳಿಕ ಈ ನಿರ್ಧಾರವು ಕಾರ್ಯರೂಪಕ್ಕಿಳಿಯುವದು.

ಗಲಭೆಗಳ ಸಂಬಂಧದ ಅಪರಾಧಗಳ ವಿಚಾರಣೆ ಮಾಡಲು ಕೊಲ್ಹಾಪುರದಲ್ಲಿ ವಿಶೇಷ ನ್ಯಾಯಾಲಯ ಸ್ಥಾಪಿತವಾಗುವದು.

ಕೊಲ್ಹಾಪುರದಲ್ಲಿ ಕರ್ನಾಟಕ ಮಹಾರಾಷ್ಟ್ರ ಮೋಟರ ಸಂಘದ ಸಭೆ ಶ್ರೀ. ಅಶೋಕ ಮೇಥಾರ ಅಧ್ಯಕ್ಷತೆಯಲ್ಲಿ ಕೂಡಿತು. ಶ್ರೀ. ಗೋರೆಯವರು ಸಮಾರಂಭವನ್ನು ಪ್ರಾರಂಭಿಸುತ್ತ ರಾಷ್ಟ್ರೀಕರಣ ಯೋಜನೆಗೆ ಬೆಂಬಲಕೊಡಬೇಕೆಂದು ಕೇಳಿಕೊಂಡರು, ರಾಷ್ಟ್ರೀಕರಣ ಯೋಜನೆಯಲ್ಲಿಯ ಕೂಲಿಕಾರ ಪ್ರಾತಿನಿಧ್ಯವನ್ನು ಸಂಘಗಳು ಆರಿಸಿದ ಪ್ರತಿನಿಧಿಗಳಿಗೆ ಕೊಡಬೇಕೆಂಬ ಗೊತ್ತುವಳಿ ಸಭೆಯಲ್ಲಿ ಸ್ವೀಕೃತವಾಯಿತು.

ಕೊಲ್ಹಾಪುರ ದಕ್ಷಿಣ ಸಂಸ್ಥಾನಗಳ ಹಾಗು ಅವುಗಳಿಗೆ ಸಂಬಂಧಿಸಿದ ಇತರ ಜಿಲ್ಲೆಗಳೊಡನೆ ಸಹಕಾರ ಸಂಬಂಧವನ್ನಿಟ್ಟುಕೊಳ್ಳುವ ಉಪಾಯಗಳನ್ನು ಯೋಜಿಸುವದಕ್ಕಾಗಿ ಈ ಭಾಗಗಳ ಉಚ್ಚ ಅಧಿಕಾರಿಗಳ ಸಭೆಯೊಂದು ಸೇರಿತು. ಎಲ್ಲ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಲಾಯಿತು. ಆಗಾಗ ಇಂಥ ಸಭೆ ಸೇರಿಸಬೇಕೆಂದು ಗೊತ್ತಾಯಿತು.

ಕೊಲ್ಹಾಪುರದ ಹಿಂದಿನ ಮಂತ್ರಿಗಳಾದ ಶ್ರೀ. ಬಾಗಲ ಮಧವರಾಯರು ಅಡಳಿತಗಾರರಾದ ಶ್ರೀ. ನಂಜಪ್ಪನವರೊಡನೆ ತೀಕ್ಷ್ಣ ಚರ್ಚೆ ನಡೆಸಿದರೆಂದು ತಿಳಿಯುತ್ತದೆ. ಮಹಾತ್ಮರ ಮರಣಾನಂತರದ ಗಲಭೆಗಳ ಸಂಬಂಧದಲ್ಲಿ ಬಾಗಲರ ಹೆಸರನ್ನು ಬಹಳ ಜನರು ಹೇಳುತ್ತಿರುವದರಿಂದ ಅವರು ಜೇಲಯಾತ್ರೆಯ ಸಿದ್ಧತೆಯನ್ನು ಮಾಡಿರುವರಂತೆ. ಇನ್ನು ಮೇಲೆ ಜೇಲಿನಲ್ಲಿರುವದೇ ಒಳ್ಳೇದೆಂದು ಅವರ ಅಭಿಪ್ರಾಯವಾಗಿದೆಯಂತೆ. ಆದರೆ ಗಲಭೆಗಳ ವಿಚಾರಣೆ ಪೂರ್ಣವಾಗುವ ವರೆಗೆ ಅವರನ್ನೂ ಬಂಧಿಸಲಿಕ್ಕಿಲ್ಲೆಂದು ತೋರುತ್ತದೆ.

ಚಿತ್ರದುರ್ಗದ ಪ್ರಸಿದ್ಧ ದರೋಡೆಗಾರರಾದ ಮೊದ್ದನಕೇರಿ ಚನ್ನಬಸಪ್ಪನೆಂಬವನು ತಂಡಸಹಿತವಾಗಿ ಶ್ರೀ ಕಲ್ಲಪ್ಪ ಗೌಡರ ಮನೆಯನ್ನು ಮುತ್ತಿ ಅವರನ್ನು ಅವರ ಮಗನನ್ನು ಹೊಡೆದು ಬಸಿರಿಯಾದ ಮಗಳನ್ನೂ ಗಾಯಗೊಳಿಸಿದನೆಂದು ತಿಳಿಯುತ್ತದೆ. ಕಲ್ಲಪ್ಪ ಗೌಡರು ಆಸ್ಪತ್ರೆಯಲ್ಲಿ ಮರಣ ಹೊಂದಿದರು. ಆರೋಪಿಯು ಫರಾರಿಯಾಗಿರುವನು. ಕಳೆದ ವರ್ಷ ಚನ್ನಬಸಪ್ಪನು ಇದೇ ತಾಲೂಕಿನ ಅಯ್ಯನಹಳ್ಳಿ ಗ್ರಾಮವನ್ನು ಮುತ್ತಿದ್ದರ ಸಂಬಂಧದ ಖಟ್ಲೆ ಇನ್ನೂ ಕೋರ್ಟಿನಲ್ಲಿ ನಡೆದಿದೆ.

## ಬೆಂಗಳೂರು – ಮೈಸೂರು

ಅಭ್ಯಾಸ ಕ್ರಮದ ಎಲ್ಲ ವಿಷಯಗಳು ಇನ್ನೂ ಮುಗಿದಿಲ್ಲೆಂದು ಮೈಸೂರು ಸೆಂಟ ಫಿಲೋಮಿನಾ ಕಾಲೇಜಿನ ಎಲ್ಲ ಕೆಳ ವರ್ಗಗಳ ವಿದ್ಯಾರ್ಥಿಗಳು ವಾರ್ಷಿಕ ಪರೀಕ್ಷೆಯನ್ನು ಬಹಿಷ್ಕರಿಸಿರುವರು. ಪಟ್ಟಣದಲ್ಲಿಯ ಇತರ ಕಾಲೇಜುಗಳ ವಿದ್ಯಾರ್ಥಿಗಳೂ ಪರೀಕ್ಷೆಯನ್ನು ಬಹಿಷ್ಕರಿಸಲಿರುವರು. ವಿಶ್ವವಿದ್ಯಾನಿಲಯವು ಪರೀಕ್ಷೆಗಳನ್ನು ಮುಂದೂಡಬಹುದೆಂದು ತಿಳಿಯುತ್ತದೆ.

ಮೈಸೂರು ಸಂಸ್ಥಾನವು ಒಂದು ಕೋಟಿ ರೂಪಾಯಿ ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಯನ್ನು ಕೂಡಿಸಬೇಕೆಂದು ಗೊತ್ತಾಗಿದ್ದು ಮೈಸೂರು ಕಾಂಗ್ರೆಸ ಅಧ್ಯಕ್ಷರಾದ ಶ್ರೀ ಟಿ. ಸಿದ್ದಲಿಂಗಯ್ಯನವರೆ ಸಮಿತಿಯ ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವರು. ಯುಗಾದಿ ಪ್ರತಿಪದೆಯಿಂದ ನಿಧಿ ಸಂಗ್ರಹ ಕಾರ್ಯ ಪ್ರಾರಂಭವಾಗಿದೆ.




## ಮುಂಬಯಿ

ಮುಂಬಯಿಯಲ್ಲಿ ಬೇಗ ಸೇರಲಿರುವ ಅ. ಭಾ. ಕಾ. ಸಮಿತಿಯ ಸಭೆಗೆ ವಿದೇಶ ರಾಯಭಾರಿಗಳಿಗೆ ಆಮಂತ್ರಣ ಕೊಡಲಾಗಿದೆಯೆಂದು ತಿಳಿದು ಬಂದಿದೆ. ಇವರ ಹೊರತಾಗಿ ಪ್ರಾಂತಗಳ ಮಂತ್ರಿಗಳಿಗೂ ಪ್ರಾಂತಿಕ ಕಾಂಗ್ರೆಸ ಸೇವಾದಳದ ನಾಯಕರಿಗೂ ಅನೇಕ ಪ್ರತಿಷ್ಠಿತರಿಗೂ ಆಮಂತ್ರಣಗಳು ಹೋಗಿರುತ್ತವೆ.

ಸ್ಥಾನಿಕ ಸಂಸ್ಥೆಗಳಿಂದ ಸಹಾಯ ಪಡೆದು ಸ್ವಂತ ಶಾಲೆಗಳನ್ನು ನಡೆಸಿದ ಶಿಕ್ಷಕರಿಗೆ ೧೯೪೬ ನವಂಬರ ೧ ರಿಂದ ತುಟ್ಟಿ ಭತ್ತೆಯ ೨೦ ದಷ್ಟು ಬೋನಸ್ಸು ಕೊಡಬೇಕೆಂದು ಮುಂಬಯಿ ಸರಕಾರವು ವಿಧಿಸಿದೆ.

ಕಾಶೀಮ ರಜವಿಯವರ ಮಾರ್ಚ ೩೧ ರ ಭಾಷಣದ ವರದಿಯನ್ನು ಆ ಸಮಾರಂಭಕ್ಕೆ ಹೋಗಿದ್ದ ಮುಸಲ್ಮಾನ ಮಿತ್ರರಿಂದ ನಾನು ಪ್ರತ್ಯಕ್ಷ ಕೇಳಿದ್ದೇನೆಂದು ಹೈದರಾಬಾದದ ವಕೀಲರೊಬ್ಬರಾದ ಶ್ರೀ. ಶ್ರೀಖಂಡೆಯವರು ಮುಂಬಯಿಯಿಂದ ಒಂದು ಪ್ರಕಟನೆ ಹೊರಡಿಸಿದ್ದಾರೆ. ರಜವಿಯವರ ಭಾಷಣದ ಪರಿಣಾಮವಾಗಿ ಎಷ್ಟೊ ಹಿಂದುಗಳು ಹೈದರಾಬಾದದಿಂದ ಗುಳೆಕಿತ್ತಿ ಹೋದರೆಂದೂ ಅವರು ತಮ್ಮ ಪ್ರಕಟನೆಯಲ್ಲಿ ಕಾಣಿಸಿದ್ದಾರೆ.

ಹೈದರಾಬಾದದ ಇತ್ತಿಹಾದ ಗುಪ್ತಚಾರರು ಮುಂಬಯಿ, ದಿಲ್ಲಿ, ವರ್‍ಹಾಡ, ಉತ್ತರ ಸರಕಾರ, ಮದ್ರಾಸ, ಗೋವಾ ಮತ್ತು ಗಡಿಯಲ್ಲಿಯ ಎಲ್ಲ ನಗರಗಳಿಗೆ ಕಳಿಸಲ್ಪಟ್ಟಿರುವರೆಂದೂ ಅವರಿಗೆ ಹೇರಳ ಹಣಕೊಟ್ಟು ಅಲ್ಲಲ್ಲಿ ಪಂಚಮದಳ ಸ್ಥಾಪಿಸಲು, ಗಡಿಯಲ್ಲಿಯ ಹಿಂದೀ ಸೈನ್ಯಾದ ಗುಟ್ಟನ್ನು ಅರಿತು ತಿಳಿಸಲು 'ಹೈದರಾಬಾದದ ಪರವಾಗಿ ಚಳವಳಿಮಾಡಲು ಪ್ರೋತ್ಸಾಹ ಕೊಡಲಾಗುತ್ತಿದೆಯೆಂದೂ ತಿಳಿಯುತ್ತದೆ. ಜರ್ಮನಿಯಲ್ಲಿ ಹಿಟ್ಲರನ ಗುಪ್ತಚಾರ ರಹಸ್ಯ ಪದ್ಧತಿಯನ್ನು ಕಲಿತ ಕೆಲವು ಮುಸಲ್ಮಾನರು ಸೂತ್ರಚಾಲಕರಾಗಿದ್ದಾರಾಗಿ ತಿಳಿಯುತ್ತದೆ.

ಮುಂಬಯಿ ಸರಕಾರದವರು ಮೋಟರುಗಳಲ್ಲಿ ನೂರಕ್ಕೆ ೨೫ ರಷ್ಟು ಹೆಚ್ಚು ಭಾರ ಹೊರಲು ಅಪ್ಪಣೆ ಕೊಟ್ಟಿದ್ದಾರೆ.

ಅಹಮ್ಮದಾಬಾದ ಸಾರ್ವಜನಿಕ ಸಲಹಾ ಸಮಿತಿಯ ಸಭೆಯಲ್ಲಿ ಸೈಕಲ್ಲುಗಳು ಕಳವಾಗದಂತೆ ಅವುಗಳನ್ನು ರಜಿಸ್ಟರ ಮಾಡಿಸಬೇಕೆಂಬ ಶಿಫಾರಸು ಮಾಡಲಾಗಿದೆ.

ಕಾಂಗ್ರೆಸಿನಿಂದ ಹೊರಬೀಳಬೇಕೆಂಬ ಸಮಾಜವಾದಿಗಳ ಕರೆಗನುಸರಿಸಿ ಸೂರತದ ೧೫ ಕಾಂಗ್ರೆಸಿಗರು ಕಾಂಗ್ರೆಸಿಗೆ ರಾಜೀನಾಮೆ ಕೊಟ್ಟಿರುವರು.

ಈಗಾಗಲೇ ಕೊಡಮಾಡಿದ ೫೦ ಸಾವಿರ ಟನ್ ಆಹಾರ ಧಾನ್ಯವಲ್ಲದೆ ಕೇಂದ್ರ ಸರಕಾರದಿಂದ ಮುಂಬಯಿ ಪ್ರಾಂತಕ್ಕೆ ಮತ್ತೆ ೨೦ ಸಾವಿರ ಟನ್ ಸಿಕ್ಕುವೆಯೆಂದೂ ಆಹಾರ ಧಾನ್ಯಗಳ ಬೆಲೆಗಳು ಸಿಕ್ಕಾಬಟ್ಟೆ ಏರದಂತೆ ಮುಂಜಾಗ್ರತೆ ವಹಿಸುವ ಬಗ್ಗೆ ಮುಂಬಯಿ ಸರಕಾರವು ಪ್ರತಿಯೊಂದು ಜಿಲ್ಲೆಗೆ ೫೦೦ ಟನ್ ಗೋದಿ ಹಾಗು ಅಕ್ಕಿ ಕಳಿಸುವದೆಂದೂ ತಿಳಿಯುತ್ತದೆ.

## ಮದ್ರಾಸ

ಎಪ್ರಿಲ ೫ ನೇ ತಾ. ನ ವರೆಗೆ ಮದ್ರಾಸ ಪಟ್ಟಣದಲ್ಲಿ ೧೬೩೦ ನಿರಾಶ್ರಿತರು ಆಗಮಿಸಿದ್ದು ಸರಕಾರಿ ಶಿಬಿರಗಳಲ್ಲಿ ಅವರು ವಾಸಿಸುತ್ತಿದ್ದಾರೆಂದು ಪತ್ರಿಕಾ ಪ್ರಕಟನೆ ಹೊರಟಿದೆ.

ತ್ರಿಚನಾಪಳ್ಳಿಯ ಮುರುಗನ್ ಚಿತ್ರ ಮಂದಿರದಲ್ಲಿ ವಿದ್ಯಾರ್ಥಿಗಳ ಸಭೆಯನ್ನುದ್ದೇಶಿಸಿ ಭಾಷಣ ಮಾಡುತ್ತ ಸಮಾಜವಾದಿ ಪಕ್ಷದ ಮುಖಂಡರಾದ ಶ್ರೀ ಜಯಪ್ರಕಾಶ ನಾರಾಯಣರು, ಆರ್. ಎಸ್. ಎಸ್ ಆತ್ಮಮನೆಂದು ಸಾರುವಲ್ಲಿ ಹಿಂದುಸ್ಥಾನ ಸರಕಾರವು ಪ್ರಮಾದ ಮಾಡಿದೆಯೆಂದು ಹೇಳಿದರು.

---

ಮುಖ್ಯ ಮಂತ್ರಿ ಪಂ. ಜವಾಹರಲಾಲರು ತಾ ೧೨ ರಂದು ಹಿರಾಕುಡ ಆಣೆಕಟ್ಟಿನ ಕಾರ್‍ಯದ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಈ ಆಣೆಕಟ್ಟಿನ ಯೋಜನೆಗೆ ೪೭ ಕೋಟಿ ೮೧ ಲಕ್ಷ ರೂಪಾಯಿ ವೆಚ್ಚ ತಗಲಲಿದ್ದು ಅದು ಮುಗಿಯಲು ೬ ವರ್ಷಗಳು ಹತ್ತುವವು.

## ಹೊಸದಿಲ್ಲಿ

ಶ್ರೀ. ಮಿನೂ ರುಸ್ತುಮ ಮಸಾನಿಯವರನ್ನು ಬ್ರ್ಯಾಝಿಲದಲ್ಲಿ ಹಿಂದುಸ್ಥಾನದ ವಿಶೇಷ ಪ್ರತಿನಿಧಿ ಮತ್ತು ಸರ್ವತಂತ್ರ ಸ್ವತಂತ್ರ ದೇಶದ ರಾಯಭಾರಿಯೆಂದು ನೇಮಿಸಲಾಗಿದೆಂದು ತಾ. ೧೩ ಕ್ಕೆ ಒಂದು ಸರಕಾರಿ ಪ್ರಕಟನೆ ಹೊರಟಿದೆ. ಶ್ರೀ ಮಸಾನಿಯವರು ಬ್ಯಾರಿಸ್ಟರರಿದ್ದು ಘಟನಾ ಸಮಿತಿಯ ಸದಸ್ಯರೂ ಸುಪ್ರಸಿದ್ಧ ಲೇಖಕರೂ ಇರುವರು. ೧೯೪೩ ರಲ್ಲಿ ಇವರು ಮುಂಬಯಿಯ ಮೇಯರರಾಗಿದ್ದರು ಶ್ರೀ ಮಸಾನಿಯವರು ಬೇಗ ಬ್ರ್ಯಾಝಿಲಕ್ಕೆ ತೆರಳಲಿರುವರೆಂದು ತಿಳಿಯುತ್ತದೆ.

ಹಿಂದುಸ್ಥಾನದ ಮುಸಲ್ಮಾನರು ಹೈದರಾಬಾದಕ್ಕೆ ಹೋಗಿ ಅಲ್ಲಿ ತಮ್ಮ ಸ್ವಧರ್ಮೀಯರ ಅತ್ಯಾಚಾರಗಳನ್ನು ತಡೆಯಬೇಕು. ಇಲ್ಲವಾದರೆ ಹಿಂದುಸ್ಥಾನಕ್ಕೆ ನಿಷ್ಠರಾಗಿರುವೆವೆಂಬ ಅವರ ಪ್ರತಿಜ್ಞೆಯು ವ್ಯರ್ಥವೆಂದು ಆಚಾರ್ಯ ಕೃಪಲಾನಿಯವರು ತಾ. ೧೩ ರಂದು ಹೊಸದಿಲ್ಲಿಯಲ್ಲಿ ಹೇಳಿದರು.

ರಾಜಕೀಯ ಸ್ವಾತಂತ್ರ್ಯ ದೊರಕಿದ್ದರೂ ಇನ್ನೂ ೩೨ ಕೋಟಿ ಜನರಿಗೆ ಸಾಮಾಜಿಕ ಆರ್ಥಿಕ ಸ್ವಾತಂತ್ರ್ಯಗಳು ಬರಬೇಕಾಗಿವೆಯೆಂದೂ ಅವು ನಮ್ಮ ಕರ್ತೃತ್ವದ ಮೇಲೆಯೇ ಅವಲಂಬಿಸಿವೆಯೆಂದೂ ಭಾರತ ಸರಕಾರದ ಕೂಲಿಕಾರ ಮಂತ್ರಿಗಳಾದ ಶ್ರೀ ಜಗಜೀವನರಾಮರು ಪಾಟಣಾದಲ್ಲಿ ಭಾಷಣಮಾಡುತ್ತ ತಾ ೧೨ ರಂದು ಹೇಳಿದರು.

ಪಂಜಾಬದ ರಾಷ್ಟ್ರೀಯ ಮುಸಲ್ಮಾನರ ಮುಂದಾಳುಗಳಾದ ಪ್ರೊ. ಅಬ್ದುಲ ಮಜೀದ ಖಾನರು ರಾಷ್ಟ್ರೀಯ ಸಪ್ತಾಹ ಸಂಬಂಧದಲ್ಲಿ ಒಂದು ಸಭೆಯಲ್ಲಿ ಮಾತನಾಡುತ್ತ ನೆಹರೂ ಸರಕಾರವನ್ನು ಬಲಪಡಿಸಲು ಮತ್ತು ಕಾಂಗ್ರೆಸಿನಲ್ಲಿ ಸೇರಲು ಮುಸಲ್ಮಾನರನ್ನು ಕೇಳಿಕೊಂಡರು ಮುಸಲ್ಮಾನರನ್ನು ಬದುಕಿಸಲೆಂದೇ ಮಹಾತ್ಮರು ತಮ್ಮ ಪ್ರಾಣ ತೊರೆದ ಕಾರಣ ಗಾಂಧೀ ಸ್ಮಾರಕ ನಿಧಿಗೆ ಮುಸಲ್ಮಾನರು ಮುಕ್ತಹಸ್ತದಿಂದ ಧನಸಹಾಯ ಮಾಡಬೇಕೆಂದೂ ಬೇಡಿಕೊಂಡರು.

ಮದ್ರಾಸ ಸರಕಾರದ ಹಿಂದಿನ ಗೃಹ ಮಂತ್ರಿಗಳಾದ ಡಾ. ಸುಬ್ಬರಾಯನ್ನರು ಆಸ್ಟ್ರೇಲಿಯಾದಲ್ಲಿ ಹಿಂದಿ ಹಾಯಕಮಿಶನರಾಗಿ ನೇಮಿಸಲ್ಪಡಬಹುದೆಂದು ಇಲ್ಲಿಯ ರಾಜಕೀಯ ವರ್ಗಗಳಲ್ಲಿ ತರ್ಕವಿತರ್ಕಗಳು ನಡೆದಿವೆ.

ರೇಲ್ವೆ ಖಾತೆಯ ಮಂತ್ರಿಗಳಾದ ಡಾ. ಜಾನ ಮಥಾಯರ ಅಧ್ಯಕ್ಷತೆಯಲ್ಲಿ ಕೇಂದ್ರ ರೇಲ್ವೆ ಸಲಹಾ ಸಮಿತಿಯ ಸಭೆಯು ತಾ. ೧೦ ಕ್ಕೆ ಸೇರಿತ್ತು. ರೇಲ್ವೆ ಸ್ಟೇಶನ್ನುಗಳಲ್ಲಿ ಹಾಗೂರೇಲ್ವೆ ಗಾಡಿಗಳಲ್ಲಿ ಉಪಹಾರ ಗೃಹದ ವ್ಯವಸ್ಥೆ ೧ ನೇ ತರಗತಿಯ ಪ್ರವಾಸವನ್ನು ತೆಗೆದುಹಾಕುವದು. ಗಾಡಿಗಳಲ್ಲಿ ಭಿಕ್ಷುಕರ ಉಪದ್ರವ ತಡೆಯುವದು ೩ ನೇ ವರ್ಗದಪ್ರವಾಸಿಕರಿಗೋಸುಗ ಕಂಡಕ್ಟರ ಗಾರ್ಡರನ್ನು ನೇಮಿಸುವದು ಇವೇ ಮೊದಲಾದವುಗಳ ಚರ್ಚೆ ಈ ಸಭೆಯಲ್ಲಿ ನಡೆದಿತು.

ಹಿಂದುಸ್ಥಾನ ಸರಕಾರದ ಶಿಕ್ಷಣ ಮಂತ್ರಿಗಳಾದ ಮೌ. ಅಬುಲಕಲಂ ಅಝಾದರು ಅ. ಪ್ರೆ. ಗೆ ಇತ್ತ ಹೇಳಿಕೆಯಲ್ಲಿ ಹೈದರಾಬಾದದ ಬಗ್ಗೆ ಹೀಗೆಹೇಳಿದ್ದಾರೆ. ಹೈದರಾಬಾದ ಹಿಂದುಸ್ಥಾನಗಳ ಸಂಬಂಧವು ಹದಗೆಡುತ್ತ ನಡೆದಿದೆ. ಇದಕ್ಕೆ ಹೈದರಾಬಾದ ಸರಕಾರವೇ ಹೊಣೆ. ಹಿಂದುಸ್ಥಾನ ಸರಕಾರವು ಈ ತನಕ ಶಕ್ಯವಿದ್ದಷ್ಟು ತಾಳ್ಮೆಯ ಧೋರಣವನ್ನೇ ತಳೆದಿದೆ. ಹೈದರಾಬಾದದಲ್ಲಿ ಕೆಲವರು ಹೊಣೆಗೆಟ್ಟರೀತಿಯಲ್ಲಿ ವರ್ತಿಸುತ್ತಿರುವದು ಖಂಡನೀಯ. ನಿಜಾಮರು ಕಾಲಮಾನ ಪರಿಸ್ಥಿತಿಗೆ ಅನುಗುಣವಾಗುವಂಥ ರಾಜಕೀಯ ಸುಧಾರಣೆಗಳನ್ನು ತಮ್ಮ ರಾಜ್ಯದಲ್ಲಿ ಸಾರಬೇಕು ಇಲ್ಲವಾದರೆ ಹೈದರಾಬಾದವು ಬಹುದಿನ ಬಾಳಲಾರದು.

ಹೈದರಾಬಾದದ ಘಟನಾ ಸಲಹೆಗಾರರಾದ ಸರ ವಾಲ್ಟರ ಮಾಂಕ್ಟನ್ನರು ಹೊಸದಿಲ್ಲಿಗೆ ಬಂದು ಹೋದಂದಿನಿಂದ ಇಲ್ಲಿಯ ರಾಜಕೀಯ ವರ್ಗದಲ್ಲಿ ಹೈದರಾಬಾದ ಪ್ರಶ್ನೆಯು ಸಮಾಧಾನಕರವಾಗಿ ಬಿಡುವಲಕ್ಷಣಗಳಿಲ್ಲವೆಂಬ ಅಭಿಪ್ರಾಯ ಪಡಲಾಗುತ್ತಿದೆ.

## ಕಲಕತ್ತಾ

ಕಲಕತ್ತಾ ಪೋಲೀಸರು ತಾ ೧೦ ಕ್ಕೆ ೬ ಲಕ್ಷ ರೂಪಾಯಿ ಬೆಲೆಯುಳ್ಳ ಸುಮಾರು ೬೦ ಮಣ ಅಫುವನ್ನು ವಶಪಡಿಸಿಕೊಂಡಿದ್ದಾರೆ. ಚೀನಕ್ಕೆ ಹೋಗುವ ಹಡಗದ ಮುಖಾಂತರ ಈ ಅಫುವನ್ನು ಕಳ್ಳತನದಿಂದ ಸಾಗಿಸುವ ಹೊಂಚಿನಿಂದ ತರಲಾಗಿತ್ತೆಂದು ತಿಳಿಯುತ್ತದೆ.

ತಾ ೧೧ ರಂದು ಕಾರಕೂನರು ಕೆಲಸಕ್ಕೆ ಹಾಜರಾಗಿದ್ದರು. ಕೇಂದ್ರ ಸರಕಾರದ ಎಲ್ಲ ಕಚೇರಿಗಳೂ ಸುಸೂತ್ರವಾಗಿ ಕೆಲಸ ನಡೆಸಿದ್ದವು ಪಿಕೆಟಿಂಗ, ಉಪವಾಸ, ಲೆಕ್ಕಣಿಕೆ ಕೆಳಗಿಡುವ ಸಂಪು ಮೊದಲಾದ ಯಾವ ಘಾಟನೆಯೂ ಅಂದು ನಡೆಯಲಿಲ್ಲ ಹಾಗೂ ಪೋಲೀಸರು ಈ ಬಗ್ಗೆ ಯಾರನ್ನೂ ಬಂಧಿಸಲಿಲ್ಲವೆಂದು ಮೊದಲಾಗಿ ಪಶ್ಚಿಮ ಬಂಗಾಲದ ಸರಕಾರದಿಂದ ಪ್ರಕಟನೆ ಹೊರಟಿದೆ.

ಬಂಗಾಲ ಪ್ರಾಂತಿಕ ಟ್ರೇಡಯೂನಿಯನ್ನಿನ ಕಾಂಗ್ರೆಸಿನ ಅಧ್ಯಕ್ಷರಾದ ಶ್ರೀ ಮೃಣಾಲ ಕಾಂತಿ ಬೋಸರು ಮುಖ್ಯ ಮಂತ್ರಿ ಪಂ. ನೆಹರು ಅವರಿಗೆ ತಂತಿ ಕಳಿಸಿ ಕಲಕತ್ತೆಯ ಕೇಂದ್ರ ಸರಕಾರದ ನೌಕರರ ಸಂಪಿನ ಸಂಬಂಧದಲ್ಲಿ ಬಂಧಿತರಾದ ೨೦ ಜನರ ಪರಿಸ್ಥಿತಿಯು ಚಿಂತಾಜನಕವಿದೆಯೆಂದೂ ಅವರು ಅನ್ನ ಸತ್ಯಾಗ್ರಹ ಕೈಕೊಂಡಿದ್ದು ಆಸ್ಪತ್ರೆಯಲ್ಲಿರುವರೆಂದೂ ತಿಳಿಸಿದ್ದಾರೆ. ಶ್ರೀ ಬೋಸರು ಇವರನ್ನೆಲ್ಲ ತಾ ೧೧ ರ ಮುಂಜಾನೆ ಕಂಡಿದ್ದರು.

ಪಾಕಿಸ್ಥಾನದಲ್ಲಿ ಹಿಂದುಸ್ಥಾನದ ಹಾಯ ಕಮಿಶನರರಾದ ಶ್ರೀ ಪ್ರಕಾಶರು ತಾ. ೧೧ ರಂದು ಕಲಕತ್ತೆಗೆ ಆಗಮಿಸಿದರು ಅವರು ಅಂತರವ ಸಾಹತು ಪರಿಷತ್ತಿಗೋಸ್ಕರ ಬಂದಿರುವರಾಗಿ ತಿಳಿಯುತ್ತದೆ. ಇಲ್ಲಿಂದ ಮುಂದೆ ಅವರು ಢಾಕಾಕ್ಕೆ ತೆರಳ ಬಹುದೆಂದು ನಿರೀಕ್ಷಿಸಲಾಗಿದೆ.

---

ಒಂದೇ ಕಲ್ಲಿನಲ್ಲಿ ಕೊರೆಯಲ್ಪಟ್ಟ ೯೦ ಅಡಿ ಎತ್ತರದ ಮಹಾತ್ಮರ ಪ್ರತಿಮೆಯನ್ನು ಓಡಿಸಾದ ಭಾವಿ ರಾಜಧಾನಿಯಾದ ಭುವನೇಶ್ವರದಲ್ಲಿ ನಿಲ್ಲಿಸಲಾಗುವದು. ಈ ರಾಜಧಾನಿಯ ನಕಾಶವನ್ನು ತಯಾರಿಸಿದ ಡಾ. ಎಚ್. ಓ ಕೋನಿಸ ಬರ್ಗ ಎಂಬ ಜರ್ಮನ ತಜ್ಞರು ಈಗಾಗಲೇ ಮೈಸೂರಿನಿಂದ ಇಲ್ಲಿಗೆ ಬಂದಿರುವರು.

---

ಈಗ ಕೆಲವು ವಾರಗಳಿಂದ ಅಸ್ವಸ್ಥರಾಗಿದ್ದ ಸರದಾರ ವಲ್ಲಭಭಾಯಿ ಪಟೇಲರ ಪ್ರಕೃತಿಯು ಈಗ ಕೆಲಮಟ್ಟಿಗೆ ಸುಧಾರಿಸಿದೆ. ಆದರೂ ಡಾಕ್ಟರು ಹೆಚ್ಚು ಸಂದರ್ಶನಗಳನ್ನು ಈಯಬಾರದೆಂದು ಸಲಹೆಕೊಟ್ಟಿದ್ದಾರೆ. ಅನಿವಾರ್ಯ ಕೆಲಸಗಳಿಗೆಮಾತ್ರ ಸಂದರ್ಶನಕ್ಕೆ ಅಸ್ಪದ ಕೊಡಲಾಗುತ್ತದೆ. ಹವೆಯ ಬದಲಾವಣೆಗಾಗಿ ಸರದಾರ ಪಟೇಲರು ಈ ತಿಂಗಳ ೩ ನೇ ವಾರದಲ್ಲಿ ಮಸೂರಿಗೆ ತೆರಳಲಿರುವರು. ಅವರು ಡೆಹರಾಡೂನದಲ್ಲಿಯೂ ಕೆಲ ದಿನ ಕಳೆಯಬಹುದೆಂದು ತಿಳಿಯುತ್ತದೆ.

ಉಳಿದ ಪ್ರಾಂತಗಳಿಗಿಂತ ಆಂಧ್ರ ಪ್ರಾಂತ ಮೊದಲು ನಿರ್ಮಾಣವಾಗುವದೆಂದು ಆಂಧ್ರರು ತಮ್ಮ ಪತ್ರಿಕೆಗಳಲ್ಲಿ ಹೇಳಿಕೊಡುತ್ತಿದ್ದಾರೆ. ವಿಚಾರಾನಂತರ ಇದರಲ್ಲಿ ತಥ್ಯಾಂಶವೇನೂ ಇಲ್ಲವೆಂದು ತಿಳಿದಿದೆಯಾಗಿ ನಮ್ಮ ದಿಲ್ಲಿಯ ಸುದ್ದಿಗಾರರು ತಿಳಿಸುತ್ತಾರೆ. ಮುಂದಿನ ತಿಂಗಳ ಘಟನಾಸಮಿತಿಯು ಸೇರಿದಾಗ ಹೊಸ ಪ್ರಾಂತ ನಿರ್ಮಾಣದ ಸಾಧ್ಯಾ ಸಾಧ್ಯತೆಯನ್ನು ವಿಚಾರಿಸಲು ಒಂದು ವಿಚಾರಣೆ ಸಮಿತಿಯನ್ನು ಏರ್ಪಡಿಸಲಾಗುವದೆಂದೂ ಹೊಸ ಪ್ರಾಂತ ನಿರ್ಮಾಣ ಅಗತ್ಯವೆಂದೂ ಈ ಸಮಿತಿಯು ವರದಿ ಮಾಡಿದರೆ ಗಡಿಯ ನಿರ್ಣಯಕ್ಕಾಗಿ ಮತ್ತೊಂದು ಸಮಿತಿಯನ್ನು ಆ ಮೇಲೆ ನೇಮಿಸಲಾಗುವದೆಂದೂ ತಿಳಿಯುತ್ತದೆ.

ಹಿಂದೀ ಮತ್ತು ಗುರುಮುಖೀ ಭಾಷೆಗಳನ್ನು ಪೂರ್ವಪಂಜಾಬದ ಸರಕಾರೀ ಭಾಷೆಗಳೆಂದು ಸ್ವೀಕರಿಸಲಾಗಿದೆಯೆಂದು ತಾ ೮ ಕ್ಕೆ ಪೂ. ಪಂಜಾಬ ಸರಕಾರದ ಪ್ರಕಟನೆ ಹೊರಟಿದೆ. ಕಚೇರಿಯಲ್ಲಿಯ ಎಲ್ಲ ಇಂಗ್ಲೀಷ ಮತ್ತು ಉರ್ದುಕಾಗದ ಪತ್ರಗಳನ್ನು ಹಿಂದೀ ಮತ್ತು ಗುರುಮುಖೀ ಭಾಷೆಗಳಲ್ಲಿ ಭಾಷಾಂತರಿಸುವ ವ್ಯವಸ್ಥೆ ನಡೆದಿದೆ. ಸರಕಾರೀ ನೌಕರರೆಲ್ಲ ೩ ತಿಂಗಳಲ್ಲಿ ಹಿಂದೀ ಮತ್ತು ಗುರುಮುಖೀ ಭಾಷೆಗಳನ್ನು ಕಲಿಯಬೇಕೆಂದು ವಿಧಿಸಲಾಗಿದೆ.

ಅ. ಭಾ. ಕಾಂಗ್ರೆಸ ಸಮಿತಿಯ ಕಾರ್ಯದರ್ಶಿಗಳಾದ ಆಚಾರ್ಯ ಜುಗಲಕಿಶೋರರು ಒಂದು ಪ್ರಕಟನೆ ಹೊರಡಿಸಿ ಮುಂಬಯಿಯಲ್ಲಿ ಸೇರುವ ಅ. ಭಾ. ಕಾಂಗ್ರೆಸ ಸಮಿತಿಯ ಸಭೆಗೆ ಅ. ಭಾ. ಪ್ರಜಾಪರಿಷತ್ತಿನ ಸ್ಥಾಯೀಸಮಿತಿಯ ಸದಸ್ಯರೂ ಪ್ರಾದೇಶಿಕ ಸಮಿತಿಗಳ ಅಧ್ಯಕ್ಷರೂ ಬರಬೇಕೆಂದು ಸಂಸ್ಥಾನಗಳಲ್ಲಿ ಕಾಂಗ್ರೆಸ ಸಂಸ್ಥೆಯ ಕಾರ್ಯದ ಸಂಬಂಧದ ಚರ್ಚೆಯಲ್ಲಿ ಭಾಗವಹಿಸಬೇಕೆಂದೂ ಸೂಚಿಸಿದ್ದಾರೆ.

## ಓಡಿಸಾ

ಭಾರತದ ಮುಖ್ಯ ಮಂತ್ರಿ ಪಂಡಿತ ಜವಾಹರಲಾಲರು ತಾ॥ ೧೩ ರ ಮುಂಜಾನೆ ೧೦—೨೫ಕ್ಕೆ ಓಡಿಸಾದ ಹೊಸ ರಾಜಧಾನಿ ಭುವನೇಶ್ವರದ ಅಡಿಗಲ್ಲನ್ನು ಹಾಕಿದರು. ಜನ ಸಾಮಾನ್ಯರ ಸಂಬಂಧ ಕಟ್ಟುಗದಂತೆ ರಾಜಧಾನಿಯ ರಚನೆಯಾಗಬೇಕೆಂದೂ ದಿಲ್ಲಿಯು ಪ್ರಾಚೀನ ಪಟ್ಟಣವಾಗಿದ್ದರೂ ಅದು ಸಾಮ್ರಾಜ್ಯವಾದಿತ್ವದ ಪ್ರತೀಕವಾಗಿದೆಯೆಂದೂ ಹಿಂದುಸ್ಥಾನದ ಪಟ್ಟಣಗಳು ಹೀಗಾಗಬಾರದೆಂದೂ ಅವರು ತಮ್ಮ ಭಾಷಣದಲ್ಲಿ ಹೇಳಿದರು.

## ಪಾಕಿಸ್ಥಾನ

ಪಾಕಿಸ್ಥಾನದಲ್ಲಿ ಖೊಟ್ಟಿ ನಾಣ್ಯಗಳನ್ನು ಮಾಡುತ್ತಿರುವ ಒಂದು ಪಂಗಡವು ಪಾಕಿಸ್ಥಾನ ಅಧಿಕಾರಿಗಳಿಗೆ ತುಂಬ ವಿವಂಚನೆ ಉಂಟುಮಾಡುತ್ತದೆ. ಹೊಸ ನಾಣ್ಯಗಳು ಹೊರಟ ೫ ದಿನಗಳಲ್ಲಿಯೇ ಈ ಪಂಗಡವು ಎಂಟು ಆಣೆಯ ಖೊಟ್ಟಿ ನಾಣ್ಯಗಳನ್ನು ವ್ಯವಹಾರದಲ್ಲಿ ಸಾಗಿಸಿವೆ. ಸದ್ಯಕ್ಕೆ ವ್ಯವಹಾರದಲ್ಲಿದ್ದ ಬಹುತರ ಎಲ್ಲ ನಾಣ್ಯಗಳೂ ಖೊಟ್ಟಿ ಇವೆ. ಅಧಿಕಾರಿಗಳು ಶೋಧ ನಡೆಸಿದ್ದಾರೆ.

---

## 'ಕುವೆಂಪು'ರವರ 'ಯಮನ ಸೋಲು'

(೪ನೆಯ ಪುಟದಿಂದ)

"ಸೋಜಿಗ ! ಸೋಜಿಗ ! ಯಕ್ಷ !
ಹಿಂದೆಂದು ಕಾಣದಿಹ ಕೌತುಕವ ಕಂಡೆ."
ಎಂದು ಉದ್ಘೋಷಿಸುತ್ತ ಬರುವನು.

ಮೃತ್ಯು ನಲ್ಮೆಗೆ ಸೋತು
ಸತ್ಯವಂತನ ಜೀವವನು ಕಪ್ಪವಾಗಿತ್ತು,
ಅಶ್ವಪತಿ ಸುತೆಯ ಕೈಯೊಳು ತನ್ನ ಸೋಲನೊಪ್ಪಿಹುದಿಂದು," ಎಂಬುದಾಗಿ ನಡೆದ ಕತೆಯನ್ನೆಲ್ಲ ಉಸಿರುವನು. ಆಗ ಯಕ್ಷನು,

"ಯಮನ ಸೋಲ್ ಅಪಮಾನವಲ್ಲ ಕೀರ್ತಿಕರ
ನಿಯಮವೇ ಪರಮ ಪ್ರಮಾಣವೆಂದೆಂದಿಗೂ
ಅಲ್ಲವೆಂಬುದನೀಗ ತಿಳಿದುಕೋ......
"ನುಡಿಗೆ ನಿಲುಕದ ಬುದ್ಧಿಯರಿಯದಿಹ
ಅತ್ಯನಿರ್ವಚನೀಯ ತತ್ವ ಎಂದೀ ಸರ್ವ
ವಿಶ್ವವನು ಸರ್ವತ್ರ ತುಂಬಿ ಮರೆಯಾಗಿಹುದು
ಆ ಪರಮ ತತ್ವ ಸ್ವರೂಪವೇ ಪ್ರೇಮ"

ಎಂಬುದಾಗಿ ಈ ನಾಟಕದಿಂದ ಕಲಿಯಬೇಕಾದ ತತ್ವದ ಪಾಠವನ್ನು ಹೇಳುವನು.

"ಸಾವಿತ್ರಿ ಸತ್ಯವಂತರ ಕತೆಯ ಕೇಳಿದವರೆಲ್ಲರಾಗಲಿ ಧನ್ಯ—ನೋಡಿದವರಿಗೆ ಪುಣ್ಯ"

ವೆಂಬುದಾಗಿ ನಾನು ನಿಮಗೆ ಫಲಶ್ರುತಿ ಹೇಳಬಯಸುವೆ. ಈ ಬಗೆಯ ಪ್ರೇಮ ಜೀವನದ ನಾಟಕವನ್ನು "ಆಡಿದವರಿಗೆ ಭಕ್ತಿ"ಯೆಂದೂ ಅಂಥ ಜೀವನದ ಪ್ರಯೋಗವನ್ನು "ಮಾಡಿದವರಿಗೆ ಮುಕ್ತಿ"ಯೆಂದೂ ಬಹು ಮಾರ್ಮಿಕವಾಗಿ ಕವಿ ಸಂದೇಶವಿತ್ತಿರುವರು.

ಇಂದು ಪೂರ್ಣಯೋಗದ ಸಂದೇಶ ಜಗಕ್ಕೆ ಸಾರುತ್ತಿರುವ ಶ್ರೀ. ಅರವಿಂದರು Savitri A Legend and a symbol' ಎಂಬೊಂದು ಅಮರಕಾವ್ಯ ಬರೆದಿದ್ದಾರೆ. ಇದಕ್ಕೆ 'ಸಾಂಕೇತಿಕ ಪೌರಾಣಿಕ ರೂಪಕವೆಂದು' ಹೆಸರಿಟ್ಟಿದ್ದಾರೆ. 'The wonder and beauty of her will to be'— ಸಾವಿತ್ರಿಯ ಅದ್ಭುತ ಸುಂದರ ಜೀವನವು ಸತ್ಯಸಂಕಲ್ಪವೇ ಸರಿ ಎಂದವರು ಉಸರಿದ್ದಾರೆ.

ಈ ಮೃತ್ಯು ದೇಹದಲ್ಲಿಯೇ ಅಮೃತ ತತ್ವಸಿದ್ಧಿಯನ್ನು ಪಡೆಯುವದು ಸಾಧ್ಯವಿದೆಯೆಂಬ ಮಾತನ್ನೇ ಈ ಸನಾತನ ಕಥೆ ಲೋಕಕ್ಕೆ ಸಾರಿ ಹೇಳುತ್ತಿದೆ ಎಂದು ಶ್ರೀ. ಅರವಿಂದರು ಇಂತು ಹೇಳಿದ್ದಾರೆ.

'It models in us our diviner parts
Lifts mortal mind into a greater air
Makes yearn this life of flesh to intangible aims.
Links the body's death with Immortality's call.

ಆತ್ಮನ ಸೂಕ್ಷ್ಮ ಸುಪ್ತಶಕ್ತಿಗಳ ಕುಸುರು ಕುಸುರುಗಳನ್ನು ಉನ್ನತವಾಗಿಯೂ ಗಂಭೀರವಾಗಿಯೂ ಶ್ರೀ. ಅರವಿಂದರು ತಮ್ಮ ಅಮರ ಕಾವ್ಯದಲ್ಲಿ ಅರಳಿಸಿ ಅರಳಿಸಿ ತೋರಿಸಿದ್ದಾರೆ. ಕನ್ನಡ ಮಕ್ಕಳೇ ನೀವು ದೊಡ್ಡವರಾದ ಬಳಿಕ ಈ ಕಾವ್ಯ ಓದಿರಿ. ಭಗವಾನ್ ವ್ಯಾಸರು ದ್ವಾಪರಯುಗದಲ್ಲಿ ಹೇಳಿರುವ ಮಾತನ್ನೇ ಕಲಿಯುಗದಲ್ಲಿ ಶ್ರೀ. ಅರವಿಂದರು ಆ ಪುಣ್ಯಶೀಲಳಾದ ಸಾವಿತ್ರಿದೇವಿಯ ಆಖ್ಯಾನದಿಂದಲೇ ಭಾಷ್ಯ ಮಾಡಿ ಹೇಳಿರುವರು.

ಇರಲಿ, ಶ್ರೀ. ಪುಟ್ಟಪ್ಪನವರ ಪ್ರಸ್ತುತ ನಾಟಕದ ಬಗ್ಗೆ ಇನ್ನೂ ಅನೇಕ ಮಾತು ಹೇಳಬಹುದಾಗಿತ್ತು. ಇದರ ವಿವೇಚನೆಗೆ ಕೊಟ್ಟ ಕಾಲ ಮುಗಿಯಿತು.

ಜಯಹಿಂದ!

ಚಿಕ್ಕ ಕಥೆ

# ಗೋರ್ಕಲ್ಲು

(ಬಾಗ್ಲೋಡಿ ದೇವರಾಯ ಬಿ. ಎ. ಆನರ್ಸ್)

ನನಗೂ ನಮ್ಮ ಶಿರಸ್ತೆದಾರರಿಗೂ ಬಹಳ ಕಾಲದಿಂದ ಬೆಳೆದು ಬಂದ ಸ್ನೇಹಾಚಾರ. ಹೋಗಿ ಬರುವುದು, ಉಭಯ ಕುಶಲೋಪರಿ, ವಾಡಿಕೆಯಾಗಿದ್ದುವು. ಅವರಿಂದ ನಮಗೆ ತುಂಬಾ ಪ್ರಯೋಜನವೂ ಇಲ್ಲದಿಲ್ಲ. ನಮ್ಮ ಕಷ್ಟ ಸುಖಕ್ಕೆ ಒದಗುವ ಸದ್ಗೃಹಸ್ಥ. ತಾನು ಆಫೀಸರರಾಗದ್ದರಿಂದ, ಅವರ ಮಿತ್ರ ವೃಂದಕ್ಕೆಲ್ಲ ಒಂದು ವಿಧದ ಕಲ್ಪವೃಕ್ಷ-ಕಾಮಧೇನು. ಸಕ್ಕರೆ ಪರ್ಮಿಟೋ, ಮೆಡಿಕಲ್ ಸರ್ಟಿಫಿಕೇಟೋ, ಉದ್ಯೋಗ, ವರಾನ್ವೇಷಣೆ, ಯಾವುದಕ್ಕೇ ಆದರೂ ತಮ್ಮ ಆಫೀಸಗಿರಿ, ದೊಡ್ಡಸ್ತಿಕೆಗಳ ತಪೋಬಲವನ್ನು ನಮಗೆ ಒದಗಿಸಿಕೊಡುತ್ತಿದ್ದರು. ಉಪಕಾರಿ ಮನುಷ್ಯ.

ನಾನು ಅವರಲ್ಲಿಗೆ ಯಾವಾಗಲೂ ಹೋಗಿ ಬರುವವನೆಂದು ಹೇಳಿದೆನಷ್ಟೇ. ಅವರ ಅಳಿಯ ರಾಜೇಂದ್ರನನ್ನು ನಾನು ಸಣ್ಣಂದಿನಿಂದ ಕಂಡಿದ್ದೇನೆ. ಅವರ ಸೋದರರ ಅಳಿಯ; ರಾವ ಸಾಹೇಬ್ ಆಫೀಸರರೊಬ್ಬರ ಮಗ; ನಮ್ಮ ಶಿರಸ್ತೆದಾರರ ಪ್ರೇಮವಾತ್ಸಲ್ಯಕ್ಕೆ ಪಾತ್ರ. ಅಂದರೆ, ತಮ್ಮ ಹುಡುಗಿಯ ಭವಿಷ್ಯದ ಕಡೆಗೂ ದೃಷ್ಟಿ ಇತ್ತು ಅನ್ನಿ.

ರಾಜೇಂದ್ರ ಬಿ. ಎ ಯೋ ಏನೋ ಕಲಿಯುತ್ತಿದ್ದ. ದೊಡ್ಡ ಹುರುಪಿನ ಹುಡುಗ. ತುಂಬಾ ಮಾರ್ಕ್ಸವಾದ ಒದ್ಧಿ,ಕ್ರಾಂತಿ ತತ್ವಯಾವಾಗಲೂ ಅರ್ಭಟಿಸುತ್ತಿದ್ದ. ಅವನು ಮಾವನಲ್ಲಿದ್ದಾಗಲೆಲ್ಲಾ, ಮಾವ-ಅಳಿಯಂದಿರಿಗೆ ಮಾತಿನ ಕುರುಕ್ಷೇತ್ರ. ಶಿರಸ್ತೆದಾರರು ಎಷ್ಟೆಂದರೂ ಬಿಳಿ ಸರಕಾರದ ಉಪ್ಪುಂಡವರು. ಫರಂಗಿ ಪ್ರಭುಗಳ ಕೃಪಾಕಟಾಕ್ಷದಿಂದಲ್ಲವೇ ಕದಿರೆಯ ಗುಡ್ಡೆಯ ಮೇಲೆ ತಮ್ಮದೇ ಹೊಸ ಮಾಳಿಗೆ ಮನೆ ಶೋಭಿಸುತ್ತಿರುವುದು?

ಅವರು ಅಳಿಯನ ಉಜ್ವಲ ಕ್ರಾಂತಿ ವ್ಯಾಖ್ಯಾನದ ಅಗ್ನಿಅಸ್ತ್ರಕ್ಕೆ, ತಮ್ಮ ಸಮಾಧಾನದ, ರಾಜಭಕ್ತಿಯ, ಮಂದವಾದ ವರುಣಾಸ್ತ್ರವನ್ನು ಒಡ್ಡುತ್ತಿದ್ದರು. ರಾಜೇಂದ್ರ ಬಿಳಿ ಸರಕಾರ ಮಾಡುವ ದೇಶದ ರಕ್ತ ಶೋಷಣೆ, ದರೋಡೆ, ದೇಶವನ್ನು ಹತವೀರ್ಯರನ್ನಾಗಿ ಮಾಡುವ ಮಾಟವನ್ನು, ಖಂಡಿಸಿ. ಬೈದು ಭಂಗಿಸಿ, ತಿಲಕ, ಗಾಂಧಿ, ಸುಭಾಸ, ಜಯಪ್ರಕಾಶ ಎಂಬುದಾಗಿ ಶ್ರೀ ಮದ್ಗಂಭೀರ ನಾಮಗಳನ್ನು ಅಂದು ಗರ್ಜಿಸಿ, ತರ್ಜಿಸಿ ಹುಬ್ಬು ಹಾರಿಸಿದರೆ, ನಮ್ಮ ಶಿರಸ್ತೆದಾರರು, ಮೆಲ್ಲಗೆ ತಮ್ಮ ರಜತಾಂಕಿತ ಮೀಸೆಯನ್ನು ಗಂಭೀರವಾಗಿ ಸವರುತ್ತ, ಬೆಳ್ಳಿಯ ಕರಂಡಕದಿಂದ ನಶ್ಯ ಏರಿಸಿ, ಮೆಕಾಲೇ, ಶಾಸ್ತ್ರಿ, ಇವರ ಸುಷುಪ್ತಿಗೀತದನ್ನು ಮೃದುವಾಗಿ ಹಾಡುತ್ತಿದ್ದರು. ಚರ್ಚೆ ಏರಿಹೋದರೆ, ಮೆಲ್ಲಗೆ ನಕ್ಕು "ರಾವ್‌ಸಾಹೇಬನ ಮಗನಾಗಿ, ಶಿರಸ್ತೆದಾರರ ಅಳಿಯನಾಗಿ ಒಳ್ಳೇ ಸಿಡಿಲ ಮರಿಯಾಗಿ ಹೋಗಿಬಿಟ್ಟೆಯಲ್ಲಾ" ಎನ್ನುತ್ತಿದ್ದರು. ನಾನು, ನಡುವೆ ಬಾಯಿಹಾಕಿ, ವ್ಯಂಗವಾಗಿ "ಸ್ವಾಮಿ, ರಾವ್ ಸಾಹೇಬರ ಮಕ್ಕಳೂ, ಶಿರಸ್ತೆದಾರರ ಅಳಿಯಂದಿರೂ, ಈ ಬೆಂಕಿ ಮಾತು ಆಡಿದರೆ ಭಯವಿಲ್ಲ. ಅವರಿಗೇ ಯೋಗ್ಯ. ಬೇರೆ ಬಡಪಾಯಿಗಳು ಮಾತಾಡಿದರೆ, ಭಾರತ ಸಂರಕ್ಷಣೆಯ ಭೂತ ನುಂಗಲು ಬಾಯಿ ತೆರೆದೇ ಇರುತ್ತದೆ" ಎನ್ನುತ್ತಿದೆ.

ರಾಜೇಂದ್ರ, ತನ್ನ ಮಾಟವಾಗಿ ಕಡೆದ ಹುಬ್ಬುಗಳನ್ನು ಸ್ಫೂರ್ತಿಯಿಂದ ಹಾರಿಸಿ, ಅಟ್ಟಹಾಸದಿಂದ, "ರಾವ್‌ಸಾಹೇಬರ ಮನೆಯಲ್ಲಿ ಹುಟ್ಟಿದ ಮಾತ್ರಕ್ಕೇನೂ ಅಮರಣಾಂತ ಗುಲಾಮನಾಗಿರುತ್ತೇನೆಂದು ಬರೆದುಕೊಂಡು ಬಂದಿಲ್ಲ. ದೇಶದ ಸ್ವಾತಂತ್ರ್ಯಕ್ಕೆ ರಾವ್‌ಸಾಹೇಬಗಾರಿ ಎಲ್ಲಿಯದು ಬಿಡಿ— ಜೀವವನ್ನು ಬಲಿಗೊಡುವುದು ದೊಡ್ಡ ಮಾತಲ್ಲ...ಆಗಲಿ ಕ್ರಾಂತಿ;..ನನ್ನ ಸ್ಥಾನ ರಣರಂಗದಲ್ಲಿ" ಎಂದು ವೀರಾವೇಶದಿಂದ ಹೇಳುತ್ತಿದ್ದ. ಒಮ್ಮೊಮ್ಮೆ ಈ ಕ್ರಾಂತಿಯ ವಿಚಾರದ ಉದ್ವೇಗದಲ್ಲಿ, "ಈ ಗುಲಾಮಿ ಬಿರುದಾಂಕಿತರು; ಸರಕಾರಿ ನೌಕರರು, ನರಕೀಟಗಳು; ದೇಶದ್ರೋಹಿಗಳು. ಅವರನ್ನೆಲ್ಲಾ ನಾಶಮಾಡಬೇಕು" ಅಂದಾಗ ಮಾವ "ಶಾಂತಂ! ಪಾಪಂ!" ಎಂದು ಕಿವಿಮುಚ್ಚಿಕೊಂಡು ಭರ್ತ್ಸನೆಯ ನಗು ನಗುತ್ತಿದ್ದರು. ಶಿರಸ್ತೆದಾರರ ಮಗಳು ಜಲಜ, ಅಮೇರಿಕನ್ ಕಾಮಿಕ್ ಮತ್ತು ಫೆಶನ್ ಮಗಜಿನ್‌ಗಳ ಎಡೆಯಿಂದ, ಹುಡುಕಿ ಕಟ್ಟಿದ ತನ್ನ ಜಡೆಯನ್ನು ಕುಣಿಸುತ್ತ, ಹೊಳೆಯುವ ಕಣ್ಣುಗಳಿಂದ ಆದರ ಸೂಸುತ್ತ ಅವನ ಇಂಗ್ಲಿಷ್ ಮಿಶ್ರಿತ ವಾಗ್ಝರಿಯನ್ನು ಕೇಳಿ ಬೆರಗಾಗುತ್ತಿದ್ದುದೂ, ಅವನ ಕಡೆಗೆ ನೋಡುತ್ತಿದ್ದುದೂ ಅವನಿಗೆ ಗೊತ್ತಾಗಿತ್ತು. ಅವನ್ನು ಕಂಡಷ್ಟೂ ಅವನ ಕ್ರಾಂತಿಕಾರಕ ಮಾತಿನ ರಭಸ ಉಕ್ಕುತ್ತಿರುವುದು ನನಗೆ ತಿಳಿಯುತ್ತಿತ್ತು.

ಇವನ ಕ್ರಾಂತಿಯ ಆವೇಗವನ್ನು ಬೆರಗಾಗಿ ಭಕ್ತಿಯಿಂದ ಕಾಣುತ್ತಿದ್ದ ಇನ್ನೆರಡು ಕಣ್ಣುಗಳನ್ನು ಇವನು ಬಹಳಕಾಲ ನೋಡಿರಲಿಲ್ಲ. ಮನೆಯ ಕೆಲಸದ ಹುಡುಗ ಅಣ್ಣಪ್ಪ, ರಾಜೇಂದ್ರ ಕ್ರಾಂತಿಯ ಮಾತು ಅರ್ಭಟಿಸುತ್ತಿದ್ದಾಗಲೆಲ್ಲಾ, ತನ್ನ ದೊಡ್ಡ ಬೊಗಸೆಗಣ್ಣುಗಳನ್ನು ಅರಳಿಸಿ, ಬಾಯಿ ತೆರೆದು ಈ ದೇಶಭಕ್ತಿಯ ವಾಕ್ಸರಣಿಯನ್ನು ನುಂಗುತ್ತಿದ್ದ. ಬಿಳೀ ಸರಕಾರದ ಘೋರ ಅನ್ಯಾಯ, ರಾಕ್ಷಸೀಯತೆ, ಕಳುವಿನೀತಿ ಗಾಂಧೀಯವರ ಹೋರಾಟ, ಕಾಂಗ್ರೆಸಿನ ಘೋಷಣ, ಜಯಪ್ರಕಾಶರ ಕ್ರಾಂತಿಯ ಕಥೆಗಳನ್ನೆಲ್ಲಾ ರಾಜೇಂದ್ರ ವರ್ಣಿಸುವಾಗ, ಅಣ್ಣಪ್ಪನ ಹೆಗ್ಗಣದ ಬಿಲದಂಥ ವಿಕಾರವಾದ ಬಾಯಿ ಇನ್ನಷ್ಟು ಅಗಲವಾಗಿ ತೆರೆದು, ಮುರುಕು ಗೋಡೆಯ ಭಗ್ನಾವಶೇಷದಂಥ, ಅವನ ಓರೆ ಕೋರೆ ದಂತದ ಪಂಕ್ತಿಯನ್ನು, ಅವನ ಅರಳಿದ ಬೊಗರೆಗಣ್ಣನ್ನು, ಆತುರತೆಯಿಂದ ಚಾಚಿದ ಕೊಕ್ಕರೆ ಕತ್ತನ್ನೂ, ನೋಡಿ ನನಗೆ ಕಿಸಕ್ಕನೆ ನಗು ತುಂಬಿ ಬರುತ್ತಿತ್ತು. ಒಂದು ಬಾರಿ ನನ್ನ ನಗುವಿನಿಂದ ರಾಜೇಂದ್ರನಿಗೆ ಥಕ್ಕನೆ, ಈ ಹುಡುಗನ ವಿಕಾರವಾದ ನೋಟ ಕಣ್ಣಿಗೆ ಬಿತ್ತು. ಇವನ ಮಾತು ಮಾತನ್ನೆಲ್ಲಾ, ಆ ಕಪ್ಪೆಯಂತಹ ಕಣ್ಣುಗಳು ಗೆರೆಸೆಕಿವಿಗಳು ಸ್ಪಷ್ಟವಾಗಿ ನುಂಗುತ್ತಿದ್ದವು.

ರಾಜೇಂದ್ರ ಒಮ್ಮೆಲೆ ನಿಲ್ಲಿಸಿಬಿಟ್ಟ, ಅವನ ಮಾತಿನ ಕುದುರೆಗೆ ಒಮ್ಮೆಲೆ ಲಗಾಮು ಹಾಕಿದಂತಾಯಿತು. ನನ್ನನ್ನೂ ಶಿರಸ್ತೆದಾರರನ್ನೂ ಸಾಶಂಕ ದೃಷ್ಟಿಯಿಂದ ನೋಡಿದ.

ಅದು ೧೯೪೨ ರ ಕಾಲ, ದೇಶದ ಕ್ರಾಂತಿಯ ಜ್ವಾಲಾಮುಖಿ. ಮೂಲೆ ಮೂಲೆಯಲ್ಲೂ ಯುದ್ಧಸನ್ನಾಹ. ಅದಕ್ಕೆ ಸರಿಯಾಗಿ, ಗಲ್ಲಿಗಲ್ಲಿಯಲ್ಲಿ, ಸಂದಿಗೊಂದಿನಲ್ಲಿ, ಸರಕಾರದ, ಹದ್ದುಗಣ್ಣಿನ, ಒಣ ಮೋರೆಯ, ಹೊಟ್ಟೆಗಾಗಿ ಆತ್ಮವನ್ನು ಮಾರಿಕೊಂಡ, ಬಡಪಾಯಿ ಬೇಹುಗಾರರು ಸಿ. ಐ. ಡಿ. ಗಳು. ಬಾಯಿ ಬಿಚ್ಚಿ ಮಾತಾಡುವದೆಂದರೆ ಸ್ವಲ್ಪ ಭಯ. ಹೋಟೆಲುಗಳ ಮಾಣಿಗಳ, ಹಣ್ಣು ಮಾರುವವರ, ಅದೇಕೆ ಯಾರ ಎದುರೂ ಗಟ್ಟಿಯಾಗಿ, ರಾಜಕೀಯ ಮಾತುಗಳನ್ನು ಆಡುವದು ಸುಖಕರವಾಗಿರಲಿಲ್ಲ.

ರಾಜೇಂದ್ರ ಇಂಗ್ಲೀಷಿನಲ್ಲಿ ಕೇಳಿದ: "ಆ ಪ್ರಾಣಿ ಯಾಕೆ ಹಾಗೆ ಉಸಿರುಗಟ್ಟಿ ಕೇಳುತ್ತಿದೆ? ನನಗೇನೋ ಅವನ ನಮೂನೆ ಚೆನ್ನಾಗಿ ಕಾಣುವುದಿಲ್ಲ. I dont like the looks of the fellow ಕಣಿ, ಸಿ.ಐ ಡಿ. ಯ ಹಾಗೆ ದಿನಾ ಬಿಡದೆ ನನ್ನ ಮಾತನ್ನೆಲ್ಲಾ ಕೇಳುತ್ತಿದ್ದಾನಲ್ಲಾ.. ಅವನ ಕಣ್ಣುಗಳಂತೂ ಶುದ್ಧ ಸಿ.ಐ.ಡಿ. ಯ ತರಾನೇ ಇವೆ"

ಆಗ ನನಗೂ ನೆನಪಾಯಿತು. ಅಣ್ಣಪ್ಪ ನನ್ನೊಡನೆ, ಕೆಲವು ಬಾರಿ ಬಹಳ ಆತುರತೆಯಿಂದ ವಿಚಾರಿಸಿದ್ದ. "ಸ್ವಾಮಿ, ಇದೆಲ್ಲಾ ಏನು ಕತೆ? ಯಾಕೆ ಲಾಠಿ ಚಾರ್ಜ? ಏಕೆ ಗಾಂಧಿಯವರ ಕೈದು? ಏಕೆ ದೊಂಬಿ, ಏಕೆ ಸಂಹಾರ?" ಎಂದು ನಾನೂ ನನ್ನ ದೇಶ ಭಕ್ತಿಯ ವಾಗ್ವಿಲಾಸವನ್ನು ಪ್ರದರ್ಶಿಸಿದ್ದೆ. ವ್ಯಾಖ್ಯಾನ ಮಾಡಲು ಎಲ್ಲಿ ಸಿಗುತ್ತದೆ ಸಂದರ್ಭ? ಮನೆಯಲ್ಲಂತೂ ಮನೆಯವಳ ವ್ಯಾಖ್ಯಾನ ಕೇಳಿಕೊಂಡೇ ಇರುವುದಾಯಿತು. ನನಗೂ ಒಳಗಿಂದೊಳಗೆ ತುಸು ಚಳಿಯುಂಟಾಯಿತು.

ಶಿರಸ್ತೆದಾರರು ನಮಗಿಬ್ಬರಿಗೂ ಭರವಸೆ ಕೊಟ್ಟರು "ಛೇ! ಶುದ್ಧ ಪಶು! ಮೆದುಳೇ ಇಲ್ಲ.... ಮಹಾ ಗೋರ್ಕಲ್ಲು; ಜಡಿ ಮಳೆ ಸುರಿದರೂ ನೀರು ಕುಡಿಯುವಂಥದಲ್ಲ..."

ಆದರೆ ರಾಜೇಂದ್ರನಿಗೇನೋ ಮನಸ್ಸು ಸ್ವಸ್ಥವಾಗಿಲ್ಲ ಕಾಣುತ್ತದೆ. ಶಿರಸ್ತೆದಾರರು ಅಣ್ಣಪ್ಪನಿಗೆ "ಮುಟ್ಠಾಳಾ ನಾಲ್ಕು ಜನ ಕೂಡಿ ಮಾತಾಡುವಲ್ಲಿ, ತಟ್ಟೀ ರಾಯನ ಹಾಗೆ ಯಾಕೆ ಬಿದ್ದುಕೊಂಡಿರುವುದು? ಹೊರಗೆ ಜಗಲಿಯಲ್ಲಿ ಕುಳ್ಳಿರಿಸೋ. ಕೆಲಸ ಇಲ್ಲವೆ? ಮೈಗಳ್ಳ! ಹೋಗಿ ಬಟ್ಟೆ ಒಗಿಯ ಬಾರದೆ? ನಡುಮನೆಗೆ, ನಾಲ್ಕು ಜನ ಮಾತನಾಡುತ್ತಿದ್ದಾಗ ಕಾಲಿಡಬಾರದೆಂದು ಸಾವಿರ ಸಲ ಹೇಳಿದ್ದೇನೆ. ಗೋರ್ಕಲ್ಲ ಮೇಲೆ ಮಳೆ... ಜಾಗ್ರತೆ" ಎಂದು ಗುಡುಗಿ ಓಡಿಸಿದರು. ಅಣ್ಣಪ್ಪ ತನ್ನ "ಸಿ. ಐ. ಡಿ." ಕಣ್ಣುಗಳನ್ನು ಕೆಳಹಾಕಿ ಕೋಣೆಯಿಂದ ಹುಸುಕಿದ.

× × ×

ದೇಶದಲ್ಲಿ ಗೊಂದಲವೇಳುವಾಗ ನಮೂರಲ್ಲೂ, ಒಂದು ತುಸು, ಬಿಣ್ಣಲು ಕೀರಿನಲ್ಲಿ ಝುಂಝಾವಾತವೆದ್ದಿತೆನ್ನಿ. ಒಂದೆರಡು ಬಾರಿ ಲಾಠಿಚಾರ್ಜ, ಪಲಾಯನ, ಎಲ್ಲಾ ಆದುವು— ಯಥಾಸಾಂಗವಾಗಿ. ಧುರೀಣರು ದೂರ ಹೋಗಿ ಭೂಮ್ಯಂತರ್ಗತ (Underground) ಕಾರ್ಯಕಲಾಪಗಳನ್ನು ಅಂದರೆ, ಕಣಿಸಂತೆ ವ್ಯಾಪಾರವನ್ನು ನಡೆಸತೊಡಗಿದರು. ಉಳಿದ ವೀರಾಧಿವೀರರು, ಭೀಮಾರ್ಜುನಸದೃಶ ಅತಿರಥ ಮಹಾರಥಿಗಳು ತಮ್ಮ ತಮ್ಮ ಅಡುಗೆ ಮನೆಯಲ್ಲಿ ಅಜ್ಞಾತವಾಸ ಮಾಡಿದರು. ಆಗಾಗ್ಗೆ ಕೆಲಸವಿಲ್ಲದ ಶಾಲೆ ಹುಡುಗರೂ ಓದಲು ಬಾರದೆ, ಬೀದಿ ಕೆಲಸದವರನ್ನು ಕೂಡಿಕೊಂಡು, ಹಿರಿಯರೂ ಜ್ಞಾನವೃದ್ಧರೂ ಆದ ನಾಯಕರ ಮಾತು ಕೇಳದೇ ಸಭೆಕೂಡಿಸಿ, ಮೆರವಣಿಗೆ ಮಾಡಿ, ತಂತಿ ಕಡಿದು ಪೋಲೀಸರ ಆಗ್ರಹವನ್ನು ಕೆರಳಿಸಿ, ತಂತಮ್ಮ ತಲೆಬುರುಡೆಗಳನ್ನು ಒಡೆಸಿಕೊಳ್ಳುತ್ತಿದ್ದರು. ಕೆಲಸವಿಲ್ಲದ ಸೋಮಾರಿಗಳು, ಅಶಿಕ್ಷಿತರು, ಹುಂಬರು, ಕೂಲಿಯವರು ಸಭ್ಯಜನ ಶಿರೋಮಣಿಗಳಾಗಿ ರಾರಾಜಿಸಿದರು.

ಒಂದು ಸಂಜೆ, ಕಾಫಿ ತಿಂಡಿ ನುಂಗಿ, ಪಚನಕಾರ್ಯಕ್ಕೆ ಅನುಕೂಲವಾಗುವಂತೆ ಮೈದಾನಿನ ಕಡೆ ತಿರುಗುತ್ತಿದ್ದಾಗ ಇಂತಹದೇ ಒಂದು ಲಾಠೀ ತಾಂಡವ ಲೀಲೆ ಕಂಡುಬಂತು. ಒಂದು ನೂರು ಜನರ ಜಂಗುಳಿಯ ಮೇಲೆ ಮಲಬಾರ್ ಪೋಲೀಸರು, ಹುಳಿ ಹೆಂಡದಿಂದ ಅಭ್ಯರ್ಥಿತರಾಗಿ, ಉತ್ಸಾಹದಿಂದ ಲಾಠಿಗಳೊಡನೆ ಲೀಲೆಯಾಡುತ್ತಿದ್ದರು. ಏಳೆಂಟು ಶಿರೋಮಥನಗಳನ್ನು ನಾನೇ ನೋಡಿದೆ. ಹೆಚ್ಚಿನವರು ತಡೆಯಲಾರದೆ ಓಡಿದರು. ತಲೆಯೊಡೆದುಕೊಂಡು ಜ್ಞಾನವಿಲ್ಲದೆ ಬಿದ್ದ ಅಥವಾ ಜ್ಞಾನವಿಲ್ಲದೆ ತಲೆಯೊಡಸಿಕೊಂಡ ಕೆಲವು ಮೂರ್ಖ ಪ್ರಾಣಿಗಳನ್ನು ಪೋಲೀಸರು ಸೇವೆ ಸಲ್ಲಿಸುತ್ತ ಪೋಲೀಸ್ ರಥದೊಳಕ್ಕೆ ತುರುಬುತ್ತಿದ್ದರು. ತುಸು ದೂರದಲ್ಲೇ ದಿಟ್ಟಿಸಿ ನೋಡಿದೆ ಹತ್ತಿರ ಹೋಗಲು ಸಾಹಸವಾಗಲಿಲ್ಲ. ಏಕೆಂದರೆ ನಮ್ಮ ಶಾಂತಿ ರಕ್ಷಕರ ತಾಂಡವ ಲೀಲೆ ಅಸಮಾನವಾದುದು. ಅದಕ್ಕೆ ಕಾಲ, ಪಾತ್ರ, ಲಯಗಳಿಲ್ಲ. ನಾಲ್ಕು ದಿನದ ಹಿಂದೆ ಬೇಡುವವಳೊಬ್ಬಳ, ಉಳಿದ ಒಂದೇ ಕಾಲನ್ನು ನಿವಾರಿಸಿ ಅವಳನ್ನು ಅವಳ ವೃತ್ತಿಗೆ ಇನ್ನೂ ಯೋಗ್ಯಳನ್ನಾಗಿ ಮಾಡಿದ್ದರು.

ರಥದೊಳಗೆ ಪ್ರವೇಶಿಸುತ್ತಿರುವ ಬಡಪಾಯಿಗಳಲ್ಲಿ ಒಮ್ಮೆಲೆ ಎರಡು ದೊಡ್ಡ ಬೊಗಸೆಗಣ್ಣುಗಳು ಕಂಡುವು. "ತೊಲಗಿರಿ... ಕ್ವಿಟ್ ಇಂಡಿಯಾ... ಮಾಡುವೆವು ಇಲ್ಲವೆ ಮಡಿಯುವೆವು"... ಎಂದು ಅರ್ಭಟಿಸಲು ತೆರೆದ ವಿಕಾರವಾದ ಬಾಯಿಯೊಳಗೆ ಓರೆ ಕೋರೆ ಹಲ್ಲುಗಳು, ಕಣ್ಣು ಮೂಗಿನ ಮೇಲೆ ರಕ್ತದ ಕೆಂಪುಕೋಡಿ, "ಗಾಂಧೀಕಿ ಜೈ" ಎಂದು ಒದರುವ ಬಾಯಿಯೊಳಗೂ ರಕ್ತ, ಹೆಗಲಿನಲ್ಲೂ ಬಲ ರಟ್ಟೆಯಲ್ಲೂ ರಕ್ತ.

ಅಲ್ಲಾಂದ್ರೆ.........ನಮ್ಮ...........ಶಿರಸ್ತೆದಾರರ......ಅಳುಮಗ.........ಅಣ್ಣಪ್ಪ!

"ಏ.. ಏನು ಬೆಪ್ಪುತಕ್ಕಡಿ! ಈ ಅಳುಮಗ ಸಿಗೇಕಪ್ಪಾ ಈ ಶಿರೋಪೋಷಮ್," ಎಂದು ಕೊಂಡೆ "ಈ ಪ್ರಾಣಿಗೆ ಇದರ ತಳಬುಡವೇನು ಗೊತ್ತು? ಸುಮ್ಮನೆ ತಲೆಹೋಯ್ತು!"

ಅಲ್ಲಿಂದ, ಎಂದಿನಂತೆ ಶಿರಸ್ತೆದಾರರಲ್ಲಿ ಹೋಗಿ, ಅವರೊಡನೆ "ನಿಮ್ಮ ಅಣ್ಣಪ್ಪ"ನ ವೀರಾವೇಶದ ಸುದ್ದಿಯನ್ನು ಪ್ರಸ್ತಾಪಿಸಬೇಕು ಅನ್ನುವಷ್ಟರಲ್ಲಿ...

ಶಿರಸ್ತೆದಾರರೂ, ಶಿರಸ್ತೆದಾರರ ಮಗಳೂ ಓಡಿ ಬಂದು: "ಕೇಳಿದಿರಾ? ಈಹೊತ್ತು ಹಾಲು ಪಾಯಸ! ನಮ್ಮ ರಾಜೇಂದ್ರನಿಗೆ ಸರಕಾರಿ ಪರೀಕ್ಷೆಯಲ್ಲಿ ಸಿಲೆಕ್ಟ್ ಆಯಿತಂತೆ! ಪೋಲೀಸ್ ಡಿಪಾರ್ಟಮೆಂಟಿನಲ್ಲಿ ದೊಡ್ಡ ಕೆಲಸಾ ಸಿಕ್ಕಿತಂತೆ. ಈಗ ತಾನೆ ತಂತಿ ಕಳಿಸಿದ್ದಾನೆ. ನಮ್ಮ ಹುಡುಗನ ಬೆಲೆ ನಮಗೆ ಗೊತ್ತಿಲ್ಲವೇ? ಒಳ್ಳೇ ತಲೆ." ಎಂದರು.

ನಾನು ಅಣ್ಣಪ್ಪನ ತಲೆಯನ್ನು ನೆನೆದೆ. ಅವನ ಸುದ್ದಿಯನ್ನು ಹೇಳಲಿಲ್ಲ. ಹೇಳುತ್ತಿದ್ದರೂ ಇನ್ನು ಮುಂದಿನ, ಮದುವೆಯ ಮಂಗಲ ವಿಚಾರದಲ್ಲಿ ಮುಳುಗಿದ್ದ ಶಿರಸ್ತೆದಾರರಿಗೂ ಹುಡುಗಿಗೂ ಕೇಳಿಸುತ್ತಿರಲಿಲ್ಲ.

# ಭವಿಷ್ಯ


ಜ್ಯೋತಿಷಿ— ಕೃಷ್ಣಶಾಸ್ತ್ರಿ ಛಡೆ ಭವಿಷ್ಯ ಕಥನ ಆಫೀಸ ಖಡೇಬಜಾರ ಬೆಳಗಾವಿ.

## ಎಪ್ರಿಲ ೧೯ರಿಂದ ೨೫ ರ ವರೆಗೆ

### ಮೇಷ

ಎಲ್ಲರ ಪ್ರಕೃತಿ ಬಹಳ ಉತ್ತಮ. ಮತ್ತು ಬಹುತರ ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಮನಸ್ಸಿನಂತೆ. ಸ್ಥಾವರದಲ್ಲಿ ಕೆಲ ಹೆಚ್ಚಳ ಇಲ್ಲವೆ ಸುಧಾರಣೆ. ಉದ್ಯೋಗದಲ್ಲಿ ಉತ್ತಮ ಪ್ರಗತಿ. ಒಳ್ಳೇ ಪ್ರತಿಷ್ಠೆ, ಮತ್ತು ಲಾಭ. ಪ್ರತ್ಯಕ್ಷವಾಗಿ ಕಡಿಮೆಯಾದರೂ ಮುಂದೆ ಅದು ಬಹಳಾಗುವಂತೆ ವ್ಯವಹಾರದಲ್ಲಿ ಹೆಚ್ಚು ಕಡಿಮೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಆದರೆ ತೀವ್ರ ಮನಸ್ಸಿಗೆ ಬಂದಂತೆ ಮಾತಾಡುವದರಿಂದ ಅವರಲ್ಲಿ ಭಂಗವುಂಟಾಗುವ ಅಂಜಿಕೆ. ಮಿತ್ರತ್ವದಲ್ಲಿ ವಿರೋಧ. ಪ್ರವಾಸ ಮತ್ತು ಭೆಟ್ಟಿಯೂ ಉತ್ತಮ. ಆದರೆ ಪತ್ರವ್ಯವಹಾರ ಅಲ್ಪಸ್ವಲ್ಪ ತೊಂದರೆಯದು. ಅಶ್ವಿನಿಯ ಕೊನೆಯ ೨ ಮತ್ತು ಭರಣಿಯ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೯, ೨೦, ೨೪, ೨೫ ಅನುಕೂಲ.

### ವೃಷಭ

ಹೆಂಡತಿ ಮತ್ತು ಮಕ್ಕಳಿಗಿಂತ ನಿಮ್ಮ ಪ್ರಕೃತಿ ಅನುಕೂಲ. ಆದರೆ ಮನೆಯಲ್ಲಿಯ ಬಹಳ ಜನರು ನಿಮ್ಮ ವಿರುದ್ಧ ವರ್ತಿಸುವದರಿಂದ ಪ್ರಾಪಂಚಿಕ ಸುಖ ಕಡಿಮೆ. ಅನಪೇಕ್ಷಿತ ಅತಿಥಿಗಳು ಬರುವ ಸಂಭವ. ಸ್ಥಾವರದಲ್ಲಿ ಸ್ವಲ್ಪಮಟ್ಟಿಗೆ ಹಾನಿ. ಉದ್ಯೋಗದಲ್ಲಿ ಉತ್ತಮ ಪ್ರಗತಿ, ಸ್ಥಿರ ಪ್ರತಿಷ್ಠೆ. ಮತ್ತು ಅಂದಾಜಿಗಿಂತ ಹೆಚ್ಚು ಲಾಭ. ಆದರೂ ವೆಚ್ಚ ಮಿತಿಮೀರಿ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೇ ಯಶಸ್ಸು. ಮಿತ್ರರಲ್ಲಿ ಒಬ್ಬರಿಂದ ಬಹಳ ತೊಂದರೆ. ಆದರೆ ಉಳಿದವರಿಂದ ಒಳ್ಳೆ ಸುಖ. ಮನರಂಜನೆಯ ಬಹಳ ಪ್ರಸಂಗಗಳು ಬಂದರೂ ಸ್ವತಃ ನಿಮಗೆ ಅದರ ಉಪಭೋಗದ ಯೋಗ ಕಡಿಮೆ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಅನುಕೂಲ. ಕೃತ್ತಿಕೆಯ ಕೊನೆಯ ೨ ಮತ್ತು ರೋಹಿಣಿಯ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೧, ೨೨, ೨೫ ಅನುಕೂಲ.

### ಮಿಥುನ

ನಿಮ್ಮ ಪ್ರಕೃತಿ ಸಾಮಾನ್ಯ. ಹೆಂಡತಿಯದು ಉತ್ತಮ. ಆದರೆ ಮಕ್ಕಳು ಉಭಯತರ ಸಂಬಂಧದಲ್ಲಿ ಕೆಲ ವಿಷಯಗಳಲ್ಲಿ ಬಹಳ ಪ್ರಮಾದ ಮಾಡುವದರಿಂದ ಪ್ರಾಪಂಚಿಕ ಸಂಗತಿಗಳಲ್ಲಿ ಮನಸ್ಸು ಬೇಜಾರಗೊಳ್ಳುವದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ. ಮತ್ತು ಲಾಭವೂ ಅಷ್ಟಕ್ಕಷ್ಟೆ. ಆದರೆ ಭಾವೀ ಉತ್ಕರ್ಷಕ್ಕೆ ಒಳ್ಳೇ ಪೋಷಕವಾಗುವಂಥ ಒಂದು ದೊಡ್ಡ ಸಾಹಸದ ಕೃತ್ಯ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ. ಮತ್ತು ತೊಂದರೆ ಬಹಳ. ಆದರೆ ಕೊನೆಯಲ್ಲಿ ಉತ್ತಮ ಯಶಸ್ಸು. ಮಿತ್ರರಿಗೆ ಕೆಲ ಆಪತ್ತು ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಆರಿದ್ರಾದ ಕೊನೆಯ ೨ ಮತ್ತು ಪುನರ್ವಸುವಿನ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೯, ೨೦, ೨೪ ಅನುಕೂಲ.

### ಕರ್ಕ

ಪ್ರಕೃತಿ ಮತ್ತು ಸ್ತ್ರೀಸುಖ ಸಾಧಾರಣವೆ. ಆದರೆ ಮಕ್ಕಳಲ್ಲಿ ಕೆಲ ಬಗೆಯ ಉನ್ನತಿ, ಮತ್ತು ಅನೇಕ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಪ್ರಿಯಜನರ ಭೆಟ್ಟಿ ಸಹವಾಸ. ಮೇಲಿಂದ ಮೇಲೆ. ಸ್ಥಾವರದಲ್ಲಿ ಸ್ವಲ್ಪ ಹೆಚ್ಚಳ. ಆದರೆ ಅದು ಕೊಂಡುವದರಿಂದ ಸ್ವಲ್ಪ ಹಾನಿಯ ಅಂಜಿಕೆಯೂ ಇದೆ. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ. ಆದರೆ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಧಂದೆ ಮಾಡುವವರಿಗಿಂತ ನೌಕರರಿಗೆ ಹೆಚ್ಚು ಸುಖ, ಮತ್ತು ಯಶಸ್ಸು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಪುಷ್ಯದ ಕೊನೆಯ ೨ ಮತ್ತು ಆಶ್ಲೇಷಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೯, ೨೦, ೨೧, ೨೫ ಅನುಕೂಲ.

### ಸಿಂಹ

ನಿಮ್ಮ ಪ್ರಕೃತಿ ಬಹಳ ಉತ್ತಮ. ಆದರೆ ಹೆಂಡತಿಯದು ಬಹಳ ಕೆಡುವದು. ಮಕ್ಕಳಲ್ಲಿ ಒಬ್ಬರ ಉತ್ಕರ್ಷ. ಉದ್ಯೋಗದಲ್ಲಿ ಪ್ರಗತಿ ಕಡಿಮೆ. ಆದರೆ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು. ಕೆಲ ಸಲ ಅತಿ ಉಚ್ಚವಿದ್ದರೆ ಮತ್ತೆ ಕೆಲ ಸಲ ಅಷ್ಟೇ ನೀಚ ವಿಚಾರಗಳು ಮನಸ್ಸಿನಲ್ಲಿ ತುಂಬಿ ತುಳುಕುವದರ ಯೋಗ. ವೆಚ್ಚ ವಿಪರೀತ. ಆದರೆ ಅದರಲ್ಲಿಯ ಹೇತು ಮಾತ್ರ ಅಪೂರ್ಣ ಉಳಿಯುವ ಯೋಗ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಮಘಾದ ಕೊನೆಯ ೨ ಮತ್ತು ಪೂರ್ವಾದ ಮೊದಲನೆ ೨ ಚರಣಗಳಿಗೆ ತೊಂದರೆ ಬಹಳ. ತಾ. ೧೯, ೨೦, ೨೧, ೨೨ ಅನುಕೂಲ.

### ಕನ್ಯಾ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಆದರೂ ಪ್ರಾಪಂಚಿಕ ಕಾಟಕಟಿ ವಿಪರೀತ. ಮಕ್ಕಳಲ್ಲಿ ಒಬ್ಬರ ಉತ್ಕರ್ಷ. ಆದರೆ ಮತ್ತೊಬ್ಬನ ಅಪಕರ್ಷ. ಉದ್ಯೋಗದಲ್ಲಿ ಪ್ರಗತಿ ಬಹಳ ಜೋರಿನಲ್ಲಿ, ಪ್ರತಿಷ್ಠೆಯಲ್ಲಿ ಮಾತ್ರ ನಿರೀಕ್ಷ ಉಂಟು ಮಾಡುವಂತೆ ಸ್ಥಿತಿ. ಮತ್ತು ಲಾಭ ತುಂಬ ಇದ್ದರೂ ವೆಚ್ಚ ವಿಪರೀತ. ಸ್ವಕೀಯರೊಡನೆ ಬಹಳ ಸ್ಪರ್ಧೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಮಿತ್ರತ್ವದಲ್ಲಿ ವಿರೋಧ. ಪ್ರವಾಸ ಅತಿ ಸುಖದ್ದು. ಮತ್ತು ಅದರ ತರುವಾಯ ಭೆಟ್ಟಿ ಮತ್ತು ಪತ್ರವ್ಯವಹಾರ. ಉತ್ತರಾದ ಕೊನೆಯ ೨ ಮತ್ತು ಹಸ್ತಾದ ಮೊದಲನೆ ೨ ಚರಣಗಳಿಗೆ ಹೆಚ್ಚು ತೊಂದರೆ. ತಾ. ೨೧, ೨೨, ೨೪, ೨೫ ಅನುಕೂಲ.

### ತುಲಾ

ಪ್ರಕೃತಿಗೆ ಕಿರುಕುಳ ಕ್ಲೇಶ. ಸ್ತ್ರೀದೂರತ್ವದ ಸಂಭವ. ಪ್ರಾಪಂಚಿಕ ತೊಂದರೆ ಬಹಳ ವಿಷಯಗಳಲ್ಲಿ. ಬಂಧುವರ್ಗದವರ ಉನ್ನತಿ. ಸ್ಥಾವರದಲ್ಲಿ ಸ್ವಲ್ಪ ಅನುಕೂಲ ಘಟನೆಗಳು. ಉದ್ಯೋಗದಲ್ಲಿ ಪ್ರಗತಿ ಕಡಿಮೆಯೆ. ಆದರೆ ಪ್ರತಿಷ್ಠೆ, ಮತ್ತು ಲಾಭ ಉತ್ತಮ. ಪ್ರತಿಯೊಂದರಲ್ಲಿ ಮೊದಲು ತೊಂದರೆ, ಆದರೆ ಕೊನೆಯಲ್ಲಿ ವಿಜಯ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಮಿತ್ರ ಸುಖ ಅನುಕೂಲ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಸ್ವಾತಿಯ ಕೊನೆಯ ೨ ಮತ್ತು ವಿಶಾಖಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೯, ೨೦, ೨೪, ೨೫ ಅನುಕೂಲ.

### ವೃಶ್ಚಿಕ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಪ್ರಾಪಂಚಿಕ ಸುಖ ಎಲ್ಲ ವಿಷಯಗಳಲ್ಲಿ ಮನಸ್ಸಿನಂತೆ. ಪ್ರಿಯಜನರ ಸಹವಾಸ. ಮೌಲ್ಯ ವಸ್ತುಗಳ ಸಂಗ್ರಹ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ, ಮತ್ತು ಲಾಭವೂ ಉತ್ತಮ. ಧಂದೆದವರಿಗಿಂತ ನೌಕರದಾರರಿಗೆ ಹೆಚ್ಚು ಯಶಸ್ಸು. ಮಿತ್ರರು ಮತ್ತು ಆಶ್ರಿತರಿಂದ ಸ್ವಲ್ಪ ಮತ್ಸರ. ವಾಹನದ ಖರೀದಿ ಇಲ್ಲವೆ ಮಾರಾಟ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೇ ಯಶಸ್ಸು. ಪತ್ರವ್ಯವಹಾರಕ್ಕಿಂತ ಪ್ರವಾಸ ಮತ್ತು ಭೆಟ್ಟಿ ಹೆಚ್ಚು ಉತ್ತಮ. ಅನುರಾಧೆಯ ಕೊನೆಯ ೨ ಮತ್ತು ಜ್ಯೇಷ್ಠಾದ ಮೊದಲನೆ ೨ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೧೯, ೨೦, ೨೧, ೨೨ ಅನುಕೂಲ.

### ಧನು

ಪ್ರಕೃತಿ ಉತ್ತಮ. ಆದರೆ ಸ್ತ್ರೀ ಸುಖದಲ್ಲಿ ಸ್ವಾಭಾವಿಕ ಇಲ್ಲವೆ ಆಕಸ್ಮಿಕ ಕಾರಣಗಳಿಗೆ ವಿರಸ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ. ಸಾಮಾನ್ಯ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆಯೂ ಅನುಕೂಲ. ಆದರೆ ಲಾಭದಲ್ಲಿ ಬಹಳ ಕಡಿಮೆಯಾಗುವದರಿಂದ ಯೋಗ್ಯ ಖರ್ಚಿಗೂ ಅಡಚಣೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ ತೋರಿದರೂ ಶತ್ರುಗಳ ಜೋರು ಹೆಚ್ಚು. ಮಿತ್ರತ್ವದಲ್ಲಿ ವಿರೋಧ. ಪ್ರವಾಸಾದಿ ಕೆಲಸ ಕಷ್ಟಸಾಧ್ಯ ಅನುಕೂಲ. ಮೂಲಾದ ಕೊನೆಯ ೨ ಮತ್ತು ಪೂರ್ವಾಷಾಢದ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೯, ೨೦, ೨೧ ಅನುಕೂಲ.

### ಮಕರ

ಪ್ರಕೃತಿ, ಮತ್ತು ಪ್ರಾಪಂಚಿಕ ಸುಖ ಸಾಧಾರಣವೆ. ಆದರೆ ಮಕ್ಕಳಿಂದ ಉತ್ಸಾಹವರ್ಧಕ ಅನೇಕ ಸಂಗತಿಗಳು, ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ, ಮತ್ತು ಲಾಭವೂ ಬಹಳ ಉತ್ತಮ. ಆದರೆ ವೆಚ್ಚ ಹೆಚ್ಚಿನ ಪ್ರಮಾಣದಲ್ಲಿ. ಬಂಧುವರ್ಗದವರೊಡನೆ ವಿರೋಧ. ಸ್ಥಾವರದಲ್ಲಿ ಒಂದು ಅನುಕೂಲ ಘಟನೆ ಸಂಭವಿಸಿದರೆ ಮತ್ತೊಂದು ಅಷ್ಟೇ ತೊಂದರೆಯ ಘಟನೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಿಗೂ ಭಾರವೆನಿಸುವಂಥ ಕೆಲವೊಂದು ಅಡಚಣೆ ಅಡ್ಡ ಬರುವ ಸಂಭವ. ಪ್ರವಾಸಾದಿ ಕೆಲಸ ಮನಸ್ಸಿನಂತೆ. ಉತ್ತರಾಷಾಢದ ಕೊನೆಯ ೨ ಮತ್ತು ಶ್ರವಣಾದ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ. ೨೧, ೨೨, ೨೫ ಅನುಕೂಲ.

### ಕುಂಭ

ಪ್ರಕೃತಿ ಸಾಧಾರಣವೆ. ದರೆ ಆಹೆಂಡತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಪ್ರಿಯಜನರ ಸಹವಾಸ. ಸ್ಥಾವರದಲ್ಲಿ ಹೆಚ್ಚಳ. ಉದ್ಯೋಗದಲ್ಲಿ ಪ್ರತಿಷ್ಠೆ ಸಾಮಾನ್ಯ. ಆದರೆ ಪ್ರಗತಿ ಮತ್ತು ಲಾಭ ಉತ್ತಮ. ನೌಕರದಾರರಿಗೆ ವಿಶೇಷ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೇ ಯಶಸ್ಸು. ಪ್ರವಾಸಾದಿ ಕೆಲಸ ಸಾಮಾನ್ಯ ಅನುಕೂಲ. ಶತತಾರಿಕೆಯ ಕೊನೆಯ ೨ ಮತ್ತು ಪೂರ್ವಾಭಾದ್ರಪದದ ಮೊದಲನೆ ೨ ಚರಣಗಳಿಗೆ ಹೆಚ್ಚು ತೊಂದರೆ. ತಾ. ೧೯, ೨೦, ೨೪, ೨೫ ಅನುಕೂಲ.

### ಮೀನ

ಪ್ರಕೃತಿ ಮತ್ತು ಸ್ತ್ರೀ ಸುಖವೂ ಅನುಕೂಲ. ಕುಟುಂಬದಲ್ಲಿ ಒಂದು ವಿಶೇಷ ಉತ್ಕರ್ಷದ ಸಂಗತಿ ಸಂಭವಿಸಿದರೆ ಮತ್ತೊಂದು ಬಹಳ ಅಸಂತೋಷದ ಘಟನೆ ಸಂಭವಿಸುವ ಯೋಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆದರೆ ಕೆಲ ವಿಷಯಗಳಲ್ಲಿ ಅತಿ ಲಾಭದಿಂದ ಬುದ್ಧಿ ಭ್ರಮಿಷ್ಟವಾಗುವ ಸಂಭವ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪ್ರತಿಪಕ್ಷದವರದೇ ಹೆಚ್ಚು ಜೋರು. ಪ್ರವಾಸಾದಿ ಕೆಲಸ ಅನುಕೂಲ. ಉತ್ತರಾಭಾದ್ರಪದದ ಕೊನೆಯ ೨ ಮತ್ತು ರೇವತಿಯ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೧, ೨೨, ೨೫ ಅನುಕೂಲ.

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಪುರೋಹಿತರವರಿಂದ ಮುದ್ರಿಸಿ ಪ್ರಕಟವಾಯಿತು.



